RNI No. KARKAN/2007/22111 ಸಂಪುಟ 13 ಸಂಚಿಕೆ 2 ಅಕ್ಟೋಬರ್ 2018 ₹ 20/-



ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ
الصراط المستقيم
# ಸಿರಾತೇ ಮುಸ್ತಖೀಮ್
ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮುಖವಾಣಿ
ಸತ್ಯವಿಶ್ವಾಸಿಗಳ ಕೈಪಿಡಿ

## ಸಫರ್
## ತಿಂಗಳು ಅಶುಭವಲ್ಲ



## ವಿಲಾಯತ್, ಕರಾಮತ್, ಗೈಬ್
ಒಂದು ಅಧ್ಯಯನ

## ಅಲ್ಲಾಹು ಮೊಟ್ಟಮೊದಲು ಸೃಷ್ಟಿಸಿದ್ದೇನು?




# الصراط المستقيم

ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# ಸಿರಾತೇ ಮುಸ್ತಖೀಮ್

ಸತ್ಯವಿಶ್ವಾಸಿಗಳ ಕೈಪಿಡಿ

ಸಂಪುಟ 13 ಸಂಚಿಕೆ 02

صفر ١٤٤٠ هـ

**ಅಕ್ಟೋಬರ್ 2018**

*ಮಾಲಕರು, ಮುದ್ರಕರು ಮತ್ತು ಪ್ರಕಾಶಕರು:*

**ಮುಹಮ್ಮದ್ ಅಲಿ**

ದಾವಾ ಪಬ್ಲಿಕೇಶನ್ಸ್,
ಹಿರಾ ಕಾಂಪ್ಲೆಕ್ಸ್,
ಡೋರ್ ನಂ. 2-184/11,
2 ನೇ ಬ್ಲಾಕ್, ಕಾಟಿಪಳ್ಳ ಪೋಸ್ಟ್,
ಮಂಗಳೂರು - 575 030

*ಸಂಪಾದಕರು:*

**ಪಿ. ಅಬ್ದುಸ್ಸಲಾಂ ಕಾಟಿಪಳ್ಳ**

Mob: 9986282449
Email: asshahadat@yahoo.co.in

*ಮುಖಪುಟ ವಿನ್ಯಾಸ:*

**ಎ.ಎಸ್ಕೆ.**

*ಮುದ್ರಣ:*

Akshara Printers,
2nd Block, Katipalla,
Mangaluru. D.K.


## ಒಳಪುಟಗಳಲ್ಲಿ

### ಸಂಪಾದಕೀಯ



### ಈ ಸಂಚಿಕೆಯಲ್ಲಿ




Printed, published & owned by Muhammad Ali, Dawa Publications, Hira Complex, 2-184/11, 2nd Block, Katipalla Post, Mangaluru - 575 030. Editor: P. Abdussalam, Printed at: Akshara Printers, 2nd Block, Katipalla Post, Mangaluru. D. K. KARNATAKA

ಸಂಪಾದಕೀಯ

بسم الله الرحمن الرحيم

الحَمْدُ للهِ رَبِّ العَالَمِينَ الصَّلَاةُ وَالسَّلَامُ عَلَى أَفْضَلِ الأَنْبِيَاءِ وَالمُرْسَلِينَ
وَعَلَى آلِهِ وَصَحْبِهِ أَجْمَعِينَ أَمَّا بَعْدُ

# ಪ್ರಳಯ ಕಲಿಸುವ ಪಾಠ

ಕೇರಳ ಮತ್ತು ಕೊಡಗಿನ ರೋದನಕ್ಕೆ ಎಲ್ಲೆಡೆಗಳಲ್ಲೂ ಮಾನವೀಯತೆ ಮರುಗಿದೆ. ಒಂದು ಶತಮಾನದ ನಡುವೆ ಸಂಭವಿಸಿದ ದೊಡ್ಡ ಪ್ರಳಯದ ಹೊಡೆತಕ್ಕೆ ಸಿಲುಕಿ ಅಲ್ಲಿಯ ಜನರು ತತ್ತರಿಸಿ ಹೋಗಿದ್ದಾರೆ. ಇಂತಹ ಒಂದು ವಿನಾಶವನ್ನು ಉಭಯ ಪ್ರದೇಶಗಳ ಜನರು ನಿರೀಕ್ಷಿಸಿರಲಿಲ್ಲ. ದೂರದಲ್ಲಿರುವ ಯಾವುದೋ ರಾಜ್ಯ ಅಥವಾ ರಾಷ್ಟ್ರದಲ್ಲಿ ಏನಾದರೂ ಪ್ರಕೃತಿ ದುರಂತಗಳು ಸಂಭವಿಸಿದಾಗ ಅದು ನಮ್ಮ ಮಟ್ಟಿಗೆ ಕೇವಲ ಒಂದು ಸುದ್ದಿ ಮಾತ್ರವಾಗಿರುತ್ತದೆ. ಆದರೆ, ಅದುವೇ ನಮ್ಮ ಕಾಲಬುಡಕ್ಕೆ ಬಂದಾಗ ದುರಂತದ ಆಯಾಮ ಎಷ್ಟು ಭೀಕರವಾಗಿರುತ್ತದೆಯೆಂದು ಸ್ವಯಂ ಅನುಭವಿಸುತ್ತೇವೆ.

ನಾವು ಈ ಮೊದಲು ಜಗತ್ತಿನ ವಿವಿದೆಡೆಗಳಲ್ಲಿ ವಿಮಾನ ಅಪಘಾತದ ಸುದ್ದಿಗಳನ್ನು ಕೇಳುತ್ತಿದ್ದೆವು. ಅದು ನಮ್ಮ ಪಾಲಿಗೆ ಇತರ ಸುದ್ದಿಗಳಂತೆ ಕೇವಲ ಓದಿ ಅಥವಾ ಕೇಳಿ ಮರೆತುಬಿಡುವ ಒಂದು ಸುದ್ದಿ ಮಾತ್ರವಾಗಿತ್ತು. ಆದರೆ ಮಂಗಳೂರಿನಲ್ಲಿಯೇ ಅದು ಸಂಭವಿಸಿದಾಗ ಅಲ್ಲಿಯ ಭೀಭತ್ಸ, ಭೀಕರ, ಭಯಾನಕ ದೃಶ್ಯ ಹಾಗೂ ಅದರಲ್ಲಿ ಮಡಿದವರ ಸಂಬಂಧಿಕರ ಆರ್ತನಾದ, ಆಕ್ರಂದನ, ರೋದನಗಳಿಗೆ ನಾವೇ ಸ್ವಯಂ ಸಾಕ್ಷಿಗಳಾದೆವು. ವಿಮಾನಾಪಘಾತ ತಂದಿಡುವ ದುರಂತದ ಪ್ರತ್ಯಾಘಾತಗಳು ಅದೆಷ್ಟು ಘೋರವಾಗಿರುತ್ತದೆಯೆಂದು ಕಣ್ಣಾರೆ ಕಂಡೆವು. ಇದೀಗ ಕೇರಳ ಮತ್ತು ಕೊಡಗಿನಲ್ಲಿ ಸಂಭವಿಸಿದ ಭಿನ್ನ ರೀತಿಯ ದುರಂತದಲ್ಲಿ ಹೆಚ್ಚು–ಕಮ್ಮಿ ಅದೇ ಪರಿಸ್ಥಿತಿ ಮರುಕಳಿಸಿದೆ.

ಕೇರಳ ಮತ್ತು ಕರ್ನಾಟಕದ ಕೊಡಗಿನಲ್ಲಿ ಸಂಭವಿಸಿದ ಪ್ರಕೃತಿಯ ರುದ್ರನರ್ತನವು ಎಷ್ಟು ಜನರನ್ನು ಬಲಿತೆಗೆದುಕೊಂಡಿದೆ ಎನ್ನುವುದರ ಲೆಕ್ಕಾಚಾರ ಇನ್ನೂ ಕ್ಲಪ್ತವಾಗಿ ಲಭಿಸಿಲ್ಲ. ಆದರೂ 250ಕ್ಕೂ ಹೆಚ್ಚು ಮಂದಿ ಸಾವನ್ನಪ್ಪಿದ್ದಾರೆಂದು ಅಂದಾಜಿಸಲಾಗಿದೆ. ಹಲವಾರು ಸೇತುವೆಗಳು ಕುಸಿದು ಬಿದ್ದವು. ರಸ್ತೆಗಳ ಕುರುಹೂ ಇಲ್ಲದಂತೆ ನೀರಲ್ಲಿ ಕೊಚ್ಚಿ ಹೋದವು. ಹೆಕ್ಟೇರ್‌ಗಟ್ಟಳೆ ಹೊಲಗಳು ನಾಶವಾದವು. ಗುಡ್ಡಗಳು ಜರಿದು ಮನೆಗಳ ಮೇಲೆ ಬಿದ್ದು ಅಲ್ಲಿದ್ದ ಜನರನ್ನು ಅಪೋಶನ ತೆಗೆದುಕೊಂಡಿತು.

ಸಾವಿರಾರು ಜಾನುವಾರುಗಳು ಸತ್ತುಹೋದವು... ಯಜಮಾನನನ್ನು ಕಳೆದುಕೊಂಡ ಕುಟುಂಬಗಳು, ವಿಧವೆಯರಾದ ಸ್ತ್ರೀಯರು, ಅನಾಥರಾದ ಮಕ್ಕಳು... ಕಮರಿಹೋದ ಕನಸಿನ ಸೌಧಗಳು... ಹೌದು, ನಷ್ಟದ ಲೆಕ್ಕವನ್ನು ಮಾತ್ರ ಬಾಕಿಯಿರಿಸಿಕೊಂಡು ಸದ್ಯ ಪ್ರಕೃತಿ ಶಾಂತವಾಗಿದೆ. ದುರಂತಕ್ಕೀಡಾದ ಪ್ರದೇಶಗಳ ಜನರ ಕಣ್ಣೀರೊರೆಸಲು ನಾನಾ ಭಾಗಗಳಿಂದ ನೆರವಿನ ಮಹಾಪೂರ ಹರಿದು ಬರುತ್ತಿರುವುದು ಮಾನವೀಯತೆ ಜೀವಂತವಾಗಿರುವುದರ ದ್ಯೋತಕವಾಗಿದೆ.

ಆದರೆ, ಈ ಪ್ರಕೃತಿ ದುರಂತದ ನಡುವೆಯೂ ಜನರ ನಂಬಿಕೆಯನ್ನು ಬಂಡವಾಳವಾಗಿಟ್ಟುಕೊಂಡು ಅವರನ್ನು ಶೋಷಿಸುತ್ತಿರುವುದು ಮಾನವೀಯತೆಗೆ ವಿರುದ್ಧವಾದ ಕ್ರೌರ್ಯವಾಗಿದೆ. ಇದು ಎಲ್ಲೆಡೆ ಮಾನವೀಯ ಅನುಕಂಪವಿರುವವರು ಇರುವಂತೆ ದುರುಳರೂ ಇರುತ್ತಾರೆ ಎಂಬ ವಾಸ್ತವಿಕತೆಯನ್ನು ಅನಾವರಣಗೊಳಿಸುತ್ತದೆ.

ಒಬ್ಬರು ತಮ್ಮ ಅಭೌತಿಕ ಸಾಮರ್ಥ್ಯದಿಂದ ಕೊಚ್ಚಿಹೋದ ಮೃತದೇಹ ಎಲ್ಲಿದೆಯೆಂದು ಹೇಳುತ್ತಾರೆ ಎಂಬ ಆಧ್ಯಾತ್ಮಿಕ ಶೋಷಣೆಯ ಸುನಾಮಿಯನ್ನು ಎಬ್ಬಿಸಲು ವಾಟ್ಸಪ್ ಮತ್ತು ಫೇಸ್‌ಬುಕ್‌ಗಳ ಮೂಲಕ ಪ್ರಯತ್ನಿಸಲಾಯಿತು. ದುರಂತಕ್ಕಿಂತ ಮೊದಲೇ ಇದರ ಕುರಿತು ಒಬ್ಬರು ಭವಿಷ್ಯ ನುಡಿದಿದ್ದರು ಎಂಬ ಪ್ರಚಾರವೂ ನಡೆಯಿತು. ಕೆಲವರ ದೃಷ್ಟಿಯಲ್ಲಿ ಈ ವಿಪತ್ತಿಗೆ ಬಹಿರಂಗ ಗೋಹತ್ಯೆಯೇ ಕಾರಣ. ಬೇರೆ ಕೆಲವರ ನಿಲುವು ಪ್ರಕಾರ ಶಬರಿಮಲೆ ದೇವಸ್ಥಾನಕ್ಕೆ ಮಹಿಳೆಯರ ಪ್ರವೇಶದಿಂದಲೇ ಇಂತಹ ಅವಘಡ ಸಂಭವಿಸಿದೆ. ಇನ್ನು ಕೆಲವರ ಅಭಿಪ್ರಾಯ ಅಥವಾ ನಂಬಿಕೆಯಂತೆ ನೂತನವಾದಿಗಳು ಮೃತಪಟ್ಟ ಔಲಿಯಾಗಳನ್ನು ಅಗೌರವಿಸಿದ ಕಾರಣದಿಂದ ಪ್ರಳಯ ಸಂಭವಿಸಿದೆ.

ಮೊದಲೊಮ್ಮೆ ಅಲ್ಲಾಹೇತರರಲ್ಲಿ ಪ್ರಾರ್ಥಿಸಲು ಕುರ್‌ಆನಿನಲ್ಲಿ ಪುರಾವೆಯಿದೆಂದು ವಾದಿಸಿದ ವಿದ್ವಾಂಸರೋರ್ವರು ಈ ದುರಂತದಿಂದ ಪಾರಾಗುವ ಏಕೈಕ ಮಾರ್ಗ ಅಲ್ಲಾಹನೊಂದಿಗೆ ಪ್ರಾರ್ಥಿಸುವುದು ಮಾತ್ರ ಎಂದು ಹೇಳಿರುವುದು ಬದಲಾವಣೆಯ ಒಂದು ಉತ್ತಮ ಸೂಚನೆಯಾಗಿದೆ. ಆದರೆ ಕೆಲವರು ಈ ವಿದ್ವಾಂಸರ ನೇತೃತ್ವದಲ್ಲಿ ಜನರು ಒಂದುಗೂಡದಿರುವುದು ಮತ್ತು ಅವರನ್ನು ಅಂಗೀಕರಿಸದಿರುವುದೇ ಪ್ರಳಯಕ್ಕೆ ಕಾರಣವೆಂದು ವಾಟ್ಸಪ್, ಫೇಸ್‌ಬುಕ್‌ಗಳಲ್ಲಿ ಪ್ರಚಾರಪಡಿಸುತ್ತಿದ್ದಾರೆ.

## ಅಂಧವಿಶ್ವಾಸಗಳು:

ಇತಿಹಾಸವು ದಾಖಲಿಸಿದ ಅತ್ಯಂತ ದೊಡ್ಡ ಕ್ರೌರ್ಯ ಪ್ರಳಯದ ಹೆಸರಲ್ಲಿ ನಡೆದಿತ್ತೆಂದು ಇತ್ತೀಚೆಗಿನ ಸಂಶೋಧನೆಯಿಂದ ಪತ್ತೆಯಾಗಿದೆ. ಅದರಲ್ಲಿ 140 ಎಳೆಯ ಕಂದಮ್ಮಗಳನ್ನು ಸಾಮೂಹಿಕವಾಗಿ ಬಲಿನೀಡಲಾಗಿತ್ತು. ಇದು ಪೆರುವಿನಲ್ಲಿ 550 ವರ್ಷಗಳ ಹಿಂದೆ ನಡೆದ ಘಟನೆಯಾಗಿದೆ. ಇಂದಿನ ಟ್ರುಹಿಯೋ ನಗರದ ಸಮೀಪ ಆರ್ಕಿಯೋಲಜಿಸ್ಟ್‌ಗಳಿಗೆ ಇದಕ್ಕೆ ಸಂಬಂಧಪಟ್ಟ ಪುರಾವೆ ಹಾಗೂ ದೇಹದ ಅವಶೇಷಗಳು ಲಭಿಸಿದೆ. ಆ ಸಂದರ್ಭದಲ್ಲಿ ಪೆರುವಿನ ಪ್ರಸ್ತುತ ಪ್ರದೇಶದಲ್ಲಿ ಚಿಮು ನಾಗರಿಕತೆ ವ್ಯಾಪಿಸಿಕೊಂಡಿತ್ತು. ಇದು ನೂರಾರು ವರ್ಷಗಳ ಮೊದಲಿದ್ದ ಜನರ ಅಂಧವಿಶ್ವಾಸದೆಡೆಗೆ ಬೆಳಕು ಚೆಲ್ಲಿದೆ.

3500 ವರ್ಷಗಳ ಇತಿಹಾಸವಿರುವ ದೇವಾಲಯದ ಸಮೀಪ ನಡೆಸಿದ ಈ ಉತ್ಖನನದಲ್ಲಿ ಪತ್ತೆ ಹಚ್ಚಿದ 140 ಮಕ್ಕಳ ಅಸ್ಥಿಪಂಜರದಲ್ಲಿ ಬಹುತೇಕ ಐದು ಅಥವಾ ಹದಿನಾಲ್ಕು ವರ್ಷ ಪ್ರಾಯದವರಾಗಿದ್ದರು. ಇದು ನರಬಲಿ ಎಂದು ತಿಳಿಯುವುದಕ್ಕೆ ಸಹಾಯಕವಾದ ಸಾಕಷ್ಟು ಪುರಾವೆಗಳು ಅಲ್ಲಿ ಲಭಿಸಿದೆ. ಎಲ್ಲಾ ಮಕ್ಕಳ ಎದೆಯ ಎಲುಬು ಮುರಿಯುವಂತೆ ಬಲವಾದ ಪ್ರಹಾರ ನೀಡಲಾಗಿತ್ತು. ಎಲ್ಲರ ಪಕ್ಕೆಲೆಬುಗಳನ್ನು ಕಿತ್ತು ಪ್ರತ್ಯೇಕವಾಗಿಡಲಾಗಿತ್ತು. ಹೃದಯಗಳನ್ನು ಬೇರ್ಪಡಿಸಲಾಗಿತ್ತು. ಬಹುತೇಕ ಮಕ್ಕಳ ಮೈಗೆ ಕೆಂಬಣ್ಣ ಬಳಿಯಲಾಗಿತ್ತು. ಇದು ನರಬಲಿಗೆ ಮೊದಲು ದೇಹಕ್ಕೆ ಬಣ್ಣ ಹಚ್ಚುವ ಪುರಾತನ ಸಂಪ್ರದಾಯವಾಗಿದೆ.

ಈ ಮಕ್ಕಳ ಜೊತೆಯಲ್ಲಿ ರೋಮಕ್ಕಾಗಿ ಸಾಕುತ್ತಿದ್ದ ಲಾಮ ಎಂಬ ಜೀವಿಯನ್ನು ಕೂಡಾ ಬಲಿಯರ್ಪಿಸಲಾಗಿತ್ತು. ಇದರ ಸಂಖ್ಯೆ ಸುಮಾರು 200ರಷ್ಟಿತ್ತು. ಇವೆಲ್ಲವೂ 18 ತಿಂಗಳುಗಳಿಗಿಂತ ಕೆಳಗಿನ ಪ್ರಾಣಿಗಳಾಗಿದ್ದವು. ಚಿಮು ಜನಾಂಗವನ್ನು ಇಂತಹ ಒಂದು ಕ್ರೂರ ನರಹತ್ಯೆಗೆ ಪ್ರೇರೇಪಿಸಿದ್ದು ಯಾವುದು ಎಂಬ ಪ್ರಶ್ನೆಗೆ ಸಂಶೋಧಕರು ಉತ್ತರವನ್ನು ಕಂಡುಹಿಡಿದಿದ್ದಾರೆ. ಅದು ಮಹಾಪ್ರಳಯವಾಗಿತ್ತು. ಈ ಪ್ರಳಯದಿಂದಾಗಿ ಚಿಮು ನಾಗರಿಕತೆ ನಾಮಾವಶೇಷವಾಗುತ್ತದೆಯೆಂದು ಭಾವಿಸಿ ಅದರ ಪರಿಹಾರಕ್ಕಾಗಿ ಪ್ರಸ್ತುತ ನರಬಲಿ ನೀಡಲಾಗಿತ್ತು. ಉತ್ಖನನದಲ್ಲಿ ಪತ್ತೆಯಾದ ವಸ್ತ್ರಗಳಲ್ಲಿ ನಡೆಸಿದ ಕಾರ್ಬನ್ ಡೇಟಿಂಗ್‌ನಲ್ಲಿ ಈ ಕ್ರೌರ್ಯ ಕ್ರಿ.ಶ 1400-1450ರ ಮಧ್ಯೆ ನಡೆದಿತ್ತೆಂದು ಸಾಬೀತಾಗಿದೆ.

## ಮೊದಲ ಪ್ರಳಯ :

ಮಾನವನ ಚರಿತ್ರೆಯಲ್ಲಿ ಮೊದಲ ಪ್ರಳಯ ಸಂಭವಿಸಿದ್ದು ಪ್ರವಾದಿ ನೂಹ್(ﷺ) ರ ಕಾಲದಲ್ಲಾಗಿತ್ತೆಂದು ಕುರ್‌ಆನ್ ಹೇಳಿದೆ. ಏಕದೇವ ವಿಶ್ವಾಸದೆಡೆಗೆ ಆಮಂತ್ರಿಸಿದ ಪ್ರವಾದಿ ನೂಹ್(ﷺ) ರನ್ನು ನಿಷೇಧಿಸಿ ಪರಿಹಾಸ್ಯ ಮಾಡಿ ಅವರ ಸಂದೇಶಕ್ಕೆ ಬೆನ್ನು ತಿರುಗಿಸಿದ ಜನತೆಯನ್ನು ಶಿಕ್ಷಿಸಲು ಈ ಪ್ರಳಯ ಬಂದೆರಗಿತ್ತು. ಆ ಪ್ರಳಯದ ಭೀಕರತೆ ನಮ್ಮ ಊಹೆಗೂ ನಿಲುಕದಂತಾಗಿದೆ. ಪವಿತ್ರ ಕುರ್‌ಆನ್ ಅದನ್ನು ವಿವರಿಸುವ ಶೈಲಿಯಿಂದಲೇ ಅದರ ಭಯಾನಕತೆಯನ್ನು ನಾವು ಅಂದಾಜಿಸಬಹುದಾಗಿದೆ.



“ನಾವು ಧಾರಾಕಾರ ಮಳೆಯಿಂದ ಆಕಾಶದ ದ್ವಾರಗಳನ್ನು ತೆರೆದುಬಿಟ್ಟೆವು. ನೆಲವನ್ನು ಸೀಳಿ ಚಿಲುಮೆಗಳಾಗಿ ಮಾರ್ಪಡಿಸಿ ಬಿಟ್ಟೆವು. ಮತ್ತು ಈ ನೀರೆಲ್ಲ ವಿಧಿಸಲ್ಪಟ್ಟ ಆ ಕಾರ್ಯವನ್ನು (ವಿನಾಶದ) ಪೂರ್ತಿಗೊಳಿಸಲಿಕ್ಕಾಗಿ ಸೇರಿಕೊಂಡಿತು.” (54:11-12)

ಪರ್ವತ ಸಾದೃಶ್ಯ ಹೆದ್ದೆರೆಗಳ ಹೊಡೆತದಿಂದ ಪ್ರವಾದಿ ನೂಹ್(ﷺ) ಮತ್ತು ಅವರ ಅನುಚರರನ್ನು ಅಲ್ಲಾಹನು ಒಂದು ನಾವೆಯ ಮೂಲಕ ರಕ್ಷಿಸಿದನು. ನೂಹರು ದೇವನ ಆದೇಶ ಪ್ರಕಾರ ನಾವೆಯನ್ನು ತಯಾರಿಸುತ್ತಿದ್ದಾಗಲೂ ಸತ್ಯನಿಷೇಧಿಗಳು ಗೇಲಿಮಾಡಿ ನಗುತ್ತಿದ್ದರು. ಕೊನೆಗೆ ನೂಹ್ ಮತ್ತು ಅವರ ಮೇಲೆ ವಿಶ್ವಾಸ ತಂದವರನ್ನು ಹೊರತುಪಡಿಸಿ ಉಳಿದವರೆಲ್ಲರೂ ಆ ಗೇಲಿ, ಪರಿಹಾಸ್ಯ, ನಿಂದನೆ, ನಿಷೇಧದ ಅಂತಿಮ ಪರಿಣಾಮವನ್ನು ಅನುಭವಿಸಿದರು.

## ಮಾನವನ ಅಸಹಾಯಕತೆ:

ದ್ರೋಣಾಚಾರ್ಯ ಪಬ್ಲಿಕೇಶನ್ 2005 ಮಾರ್ಚ್‌ನಲ್ಲಿ ಪ್ರಕಾಶನಗೊಳಿಸಿದ ‘ವಿಜ್ಞಾನಚಿಪ್ಪು’ ಎಂಬ ಬೃಹತ್ ಗ್ರಂಥದ “ಸುನಾಮಿ” ಎಂಬ ಮೊದಲ ಅಧ್ಯಾಯದ ಆರಂಭದಲ್ಲಿ ಹೀಗೆ ಬರೆಯಲಾಗಿದೆ.

“2004 ಡಿಸೆಂಬರ್ 24ರಂದು ಸುಮಾತ್ರ ದ್ವೀಪದಿಂದ ಹಿಡಿದು ಆಫ್ರಿಕಾ ತೀರದ ತನಕ ಮೃತ್ಯುತಾಂಡವವಾಡಿದ ಪರ್ವತಾಕಾರದ ಹೆದ್ದೆರೆಗಳು ಮನುಷ್ಯನು ಅದೆಷ್ಟು ಅಸಹಾಯಕನೆಂಬ ಸತ್ಯವನ್ನು ನಮ್ಮ ಮುಂದೆ ಅನಾವರಣಗೊಳಿಸಿತು. ದುರಾಸೆ, ದ್ವೇಷ, ಪೈಪೋಟಿಗಳೆಲ್ಲ ಕ್ಷಣಾರ್ಧದಲ್ಲಿ ಕೊನೆಗೊಳ್ಳುತ್ತದೆ. ನಮಗೆ ನೀರು ಮತ್ತು ಬೆಳಕು ನೀಡುವ ಪ್ರಕೃತಿ ತಾಯಿ ಮಾತ್ರವಾಗಿರದೆ, ತಾನು ಉಗ್ರಸ್ವರೂಪಿಣಿ ಆಗಿದ್ದೇನೆಂದು ನೆನಪಿಸಿಕೊಡುವಾಗ ನಾವು

*41 ನೇ ಪುಟಕ್ಕೆ*

# ಸಫರ್ ತಿಂಗಳು ಅಶುಭವಲ್ಲ

ಯಾವುದೇ ವಿಚಾರಣೆಯೋ, ಶಿಕ್ಷೆಯೋ ಇಲ್ಲದೆ ಸ್ವರ್ಗ ಪ್ರವೇಶಿಸುವವರ ವಿಶೇಷಣಗಳನ್ನು ಪ್ರವಾದಿ(ﷺ) ಯವರು ಇಲ್ಲಿ ವಿವರಿಸಿದ್ದಾರೆ. ಅಂದರೆ ಅವರು ಶುಭ-ಅಶುಭಗಳಲ್ಲಿ ನಂಬಿಕೆಯಿಡುವುದಿಲ್ಲ. ಅವರು ಅವರ ರಬ್ಬಿನ ಮೇಲೆ ತವಕ್ಕುಲ್ ಮಾಡುತ್ತಾರೆ.

ಅಬ್ದುಲ್ಲಾಹ್ ಅತ್ತುವೈಜಿರೀ

**ಸಫರ್ ತಿಂಗಳ ಬಗ್ಗೆ ವರದಿಯಾದ ಕೆಲವು ಹದೀಸ್‌ಗಳು:**

عَـنْ أَبِـي هُرَيْـرَةَ رَضِيَ اللَّـهُ عَنْهُ قَـالَ: إِنَّ رَسُـولَ اللَّهِ صَلَّى اللَّهُ عَلَيْهِ وَسَـلَّمَ قَالَ: «لَا عَدْوَى وَلَا صَفَرَ وَلَا هَامَـةَ». فَقَالَ أَعْرَابِيٌّ: يَا رَسُـولَ اللَّهِ! فَمَا بَـالُ إِبِلِي تَكُـونُ فِي الرَّمْلِ كَأَنَّهَا الظِّبَـاءُ، فَيَأْتِي الْبَعِيرُ الْأَجْـرَبُ فَيَدْخُلُ بَيْنَهَـا فَيُجْرِبُهَا؟ فَقَالَ: «فَمَنْ أَعْـدَى الْأَوَّلَ؟»

1. ಅಬೂ ಹುರೈರ(ؓ) ರಿಂದ ವರದಿ: ಅವರು ಹೇಳುತ್ತಾರೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು: "ಅದ್ವಾ ಇಲ್ಲ, ಸಫರ್ ಇಲ್ಲ, ಹಾಮ ಇಲ್ಲ." ಆಗ ಒಬ್ಬ ಮರುಭೂಮಿ ನಿವಾಸಿ ಕೇಳಿದರು: "ಓ ಅಲ್ಲಾಹನ ಸಂದೇಶವಾಹಕರೇ! ಹಾಗಾದರೆ ನನ್ನ ಒಂಟೆಗಳಿಗೇನಾಗಿದೆ? ಅವು ಜಿಂಕೆಗಳಂತೆ ಮರಳುಗಾಡಿನಲ್ಲಿರುತ್ತವೆ. ಆಗ ತುರಿಕಜ್ಜಿಯಿರುವ ಒಂದು ಒಂಟೆ ಅವುಗಳ ಜೊತೆ ಸೇರಿ ಅವುಗಳಿಗೆಲ್ಲ ತುರಿ ಹತ್ತುವಂತೆ ಮಾಡುತ್ತದೆ." ಆಗ ಪ್ರವಾದಿ(ﷺ) ಯವರು ಕೇಳಿದರು: "ಹಾಗಾದರೆ ಮೊಟ್ಟಮೊದಲ ಒಂಟೆಗೆ ತುರಿ ಹತ್ತಿಸಿದವರು ಯಾರು?" (ಅಲ್‌ಬುಖಾರಿ ಮತ್ತು ಮುಸ್ಲಿಮ್)

(ಕಾಯಿಲೆ ಅಥವಾ ಅಂಗವೈಕಲ್ಯಗಳು ಅಲ್ಲಾಹನ ಹಸ್ತಕ್ಷೇಪ-ವಿಲ್ಲದೆ ನೈಸರ್ಗಿಕವಾಗಿ ಒಬ್ಬರಿಂದ ಮತ್ತೊಬ್ಬರಿಗೆ ಹತ್ತುತ್ತದೆ-ಯೆಂದು ಜಾಹಿಲೀಕಾಲದ ಅರಬ್ಬಿಗಳು ನಂಬುತ್ತಿದ್ದರು. ಈ ರೀತಿ ಒಬ್ಬರಿಂದ ಇನ್ನೊಬ್ಬರಿಗೆ ಹತ್ತುವುದನ್ನು ಅವರು 'ಅದ್ವಾ' ಎಂದು ಕರೆಯುತ್ತಿದ್ದರು.

ಪ್ರವಾದಿ(ﷺ) ಯವರು ಇಲ್ಲಿ ಅದ್ವಾ ಇಲ್ಲ ಎಂದು ಹೇಳಿರುವುದು ಒಬ್ಬರಿಂದ ಮತ್ತೊಬ್ಬರಿಗೆ ಹತ್ತುವಂತಹ ರೋಗಗಳಿಲ್ಲ ಎಂಬ ಅರ್ಥದಲ್ಲಲ್ಲ. ಬದಲಾಗಿ ಪ್ರವಾದಿ(ﷺ) ಯವರ ಮಾತಿನ ಅರ್ಥ ಅಲ್ಲಾಹನ ಹಸ್ತಕ್ಷೇಪವಿಲ್ಲದೆ ನೈಸರ್ಗಿಕವಾಗಿ ಯಾವುದೇ ಕಾಯಿಲೆಯೂ ಒಬ್ಬರಿಂದ ಇನ್ನೊಬ್ಬರಿಗೆ ಹತ್ತುವುದಿಲ್ಲ ಎಂದಾಗಿದೆ. ಆದ್ದರಿಂದಲೇ ಆರೋಗ್ಯವಂತ ಒಂಟೆಗಳ ಮಧ್ಯೆ ತುರಿಕಜ್ಜಿಯಿರುವ ಒಂಟೆಯನ್ನು ಕಟ್ಟಿದರೆ ಆ ತುರಿ ಇತರ ಒಂಟೆಗಳಿಗೆ ಹತ್ತುತ್ತದೆಯಲ್ಲವೇ ಎಂದು ಆ ಮರುಭೂಮಿ ನಿವಾಸಿ ಕೇಳಿದಾಗ ಪ್ರವಾದಿ(ﷺ) ಯವರು ಅದನ್ನು ನಿಷೇ-ಧಿಸುವುದಿಲ್ಲ. ಬದಲಾಗಿ ಅರಬ್ಬಿಗಳ ನಂಬಿಕೆಯನ್ನು ತಿದ್ದುತ್ತಾ ಮೊಟ್ಟಮೊದಲ ಒಂಟೆಗೆ ತುರಿ ಹತ್ತಿಸಿದವರು ಯಾರು ಎಂದು ಕೇಳುತ್ತಾರೆ.

ಮೊಟ್ಟಮೊದಲ ಒಂಟೆಗೆ ತುರಿ ಹತ್ತಿಸಿದ್ದು ಅಲ್ಲಾಹನಾಗಿದ್ದರೆ ಇತರ ಒಂಟೆಗಳಿಗೂ ತುರಿ ಹತ್ತಿಸುವವನು ಅವನೇ ಆಗಿದ್ದಾನೆ. ಅವನ ಹಸ್ತಕ್ಷೇಪವಿಲ್ಲದೆ, ಅವನ ತೀರ್ಮಾನ ಮತ್ತು ನಿರ್ಣಯ-ವನ್ನು ಅನುಸರಿಸದೆ ಇಲ್ಲಿ ಏನೂ ನಡೆಯುವುದಿಲ್ಲ.)

عَنْ أَبِي هُرَيْـرَةَ رَضِيَ اللَّـهُ عَنْهُ، عَـنِ النَّبِيِّ صَلَّى اللَّهُ عَلَيْهِ وَسَـلَّمَ قَـالَ: «لَا عَدْوَى وَلَا طِيَرَةَ وَلَا هَامَـةَ وَلَا صَفَرَ».

2. ಅಬೂ ಹುರೈರ(ﷺ) ರಿಂದ ವರದಿ: ಅಲ್ಲಾಹನ ಸಂದೇಶವಾಹ-ಕರು(ﷺ) ಹೇಳಿದರು: “ಅದ್ವಾ ಇಲ್ಲ, ತಿಯರ ಇಲ್ಲ, ಹಾಮ ಇಲ್ಲ, ಸಫರ್ ಇಲ್ಲ.” (ಅಲ್‌ಬುಖಾರಿ ಮತ್ತು ಮುಸ್ಲಿಮ್)

(ತಿಯರ ಎಂದರೆ ಶುಭ ಅಶುಭಗಳನ್ನು ನೋಡುವುದು. ಜಾಹಿಲೀಕಾಲದ ಅರಬ್ಬಿಗಳು ಶುಭ ಅಶುಭಗಳನ್ನು ನಿರ್ಧರಿಸಲು ಹಕ್ಕಿಗಳನ್ನು ಹಾರಿಸುತ್ತಿದ್ದರು. ಅದು ಬಲಭಾಗಕ್ಕೆ ಹಾರಿದರೆ ಶುಭ ಮತ್ತು ಎಡಭಾಗಕ್ಕೆ ಹಾರಿದರೆ ಅಶುಭ. ಹಕ್ಕಿಯ ಈ ಹಾರಾಟವನ್ನು ಅನುಸರಿಸಿ ಅವರು ತಮ್ಮ ಶುಭ ಅಶುಭಗಳನ್ನು ನಿರ್ಧರಿಸುತ್ತಿದ್ದರು.

ಹಾಮ ಎಂದರೆ ಹೆಚ್ಚಾಗಿ ರಾತ್ರಿ ವೇಳೆ ಕಬರಸ್ಥಾನದಲ್ಲಿ ಕಂಡುಬರುವ ಹಕ್ಕಿ. ಕೆಲವರು ಇದು ಗೂಬೆ ಎಂದಿದ್ದಾರೆ. ಏನೇ ಆದರೂ ಈ ಹಕ್ಕಿಯನ್ನು ಅರಬ್ಬಿಗಳು ಅಶುಭವೆಂದು ಪರಿಗಣಿಸುತ್ತಿದ್ದರು.)

ಮುಸ್ಲಿಮ್‌ನ ವರದಿಯಲ್ಲಿ ಹೀಗಿದೆ:

قَالَ رَسُـولُ اللَّهِ صَلَّى اللَّهُ عَلَيْهِ وَسَـلَّمَ: «لَا عَدْوَى وَلَا غُـولَ وَلَا صَفَرَ».

ಅಲ್ಲಾಹನ ಸಂದೇಶವಾಹಕು(ﷺ) ಹೇಳಿದರು: “ಅದ್ವಾ ಇಲ್ಲ, ಗೂಲ್ ಇಲ್ಲ, ಸಫರ್ ಇಲ್ಲ.”

(ಗೂಲ್ ಎಂದರೆ ಮರುಭೂಮಿಯಲ್ಲಿ ವಾಸಿಸುವ ಪಿಶಾಚಿ. ಈ ಪಿಶಾಚಿ ವಿಭಿನ್ನ ಬಣ್ಣಗಳಲ್ಲಿ ಪ್ರತ್ಯಕ್ಷವಾಗಿ ಮರುಭೂಮಿಯಲ್ಲಿ ಚಲಿಸುವ ಜನರನ್ನು ದಾರಿತಪ್ಪಿಸುತ್ತದೆಯೆಂದು ಅರಬ್ಬಿಗಳು ನಂಬುತ್ತಿದ್ದರು.)

عَنِ ابْنِ مَسْـعُودٍ رَضِيَ اللَّهُ عَنْهُ قَـالَ: قَامَ فِينَا رَسُـولُ اللَّهِ صَلَّى اللَّهُ عَلَيْهِ وَسَـلَّمَ فَقَالَ: «لَا يُعْدَى شَـيْءٌ شَـيْئًا». فَقَالَ أَعْرَابِيٌّ: يَا رَسُولَ اللَّـهِ! الْبَعِيرُ أَجْرَبُ الْحَشَـفَةِ نُدْبِنُـهُ فَيُجْرِبُ الْإِبِـلَ كُلَّهَـا؟ فَقَالَ رَسُـولُ اللَّهِ صَلَّـى اللَّهُ عَلَيْهِ وَسَـلَّمَ: «فَمَنْ أَجْرَبَ الْأَوَّلَ؟ لَا عَدْوَى وَلَا صَفَـرَ. خَلَقَ اللَّهُ كُلَّ نَفْـسٍ فَكَتَبَ حَيَاتَهَا وَرِزْقَهَا وَمَصَائِبَهَا».

3. ಇಬ್ನ್ ಮಸ್‌ಊದ್(ﷺ) ರಿಂದ ವರದಿ: ಅವರು ಹೇಳುತ್ತಾರೆ: ಅಲ್ಲಾಹನ ಸಂದೇಶವಾಹಕು(ﷺ) ನಮ್ಮ ಮುಂದೆ ನಿಂತು ಹೇಳಿದರು: “ಯಾವುದೇ ವಸ್ತು ಇನ್ನೊಂದು ವಸ್ತುವಿಗೆ ಏನನ್ನೂ ಹತ್ತಿಸುವುದಿಲ್ಲ.” ಆಗ ಒಬ್ಬ ಮರುಭೂಮಿ ನಿವಾಸಿ ಎದ್ದು ನಿಂತು ಕೇಳಿದರು: “ಓ ಅಲ್ಲಾಹನ ಸಂದೇಶವಾಹಕರೇ! ಶಿಶ್ನದ ತುದಿಯಲ್ಲಿ ತುರಿಕಜ್ಜಿಯಿರುವ ಒಂಟೆಯನ್ನು ನಾವು ಇತರ ಒಂಟೆಗಳೊಂದಿಗೆ ಹಟ್ಟಿಗೆ ಸೇರಿಸುತ್ತೇವೆ. ಆಗ ಅದು ಹಟ್ಟಿಯ-ಲ್ಲಿರುವ ಎಲ್ಲ ಒಂಟೆಗಳಿಗೂ ತುರಿಯನ್ನು ಹತ್ತಿಸುತ್ತದೆ.” ಆಗ ಅಲ್ಲಾಹನ ಸಂದೇಶವಾಹಕು(ﷺ) ಕೇಳಿದರು: “ಹಾಗಾದರೆ ಮೊಟ್ಟಮೊದಲ ಒಂಟೆಗೆ ತುರಿ ಹತ್ತಿಸಿದವರು ಯಾರು? ಅದ್ವಾ ಇಲ್ಲ, ಸಫರ್ ಇಲ್ಲ. ಅಲ್ಲಾಹು ಎಲ್ಲ ಜೀವಿಗಳನ್ನೂ ಸೃಷ್ಟಿಸಿ ಅವುಗಳ ಆಯುಷ್ಯ, ಅವುಗಳಿಗೆ ದೊರೆಯುವ ಆಹಾರ ಮತ್ತು ಅವುಗಳಿಗೆ ಸಂಭವಿಸುವ ಆಪತ್ತುಗಳನ್ನು ಮೊದಲೇ ದಾಖಲಿ-ಸಿಟ್ಟಿದ್ದಾನೆ.” (ಅಹ್ಮದ್, ಅತ್ತಿರ್ಮಿದಿ)

عَنِ ابْنِ عَبَّـاسٍ رَضِيَ اللَّهُ عَنْهُمَـا قَالَ: كَانُوا يَـرَوْنَ أَنَّ الْعُمْرَةَ فِي أَشْـهُرِ الْحَـجِّ مِنْ أَفْجَرِ الْفُجُـورِ فِـي الْأَرْضِ. وَيَجْعَلُـونَ الْمُحَرَّمَ صَفَرًا. وَيَقُولُـونَ: إِذَا بَرَأَ الدَّبَـرْ، وَعَفَا الْأَثَرْ،

قَـالَ أَبُو دَاوُدَ: سُـئِلَ مَالِـكٌ عَـنْ قَوْلِهِ: «لَا صَفَرَ». قَـالَ: إِنَّ أَهْلَ الْجَاهِلِيَّـةِ كَانُوا يُحِلُّونَ صَفَـرَ. يُحِلُّونَهُ عَامًـا وَيُحَرِّمُونَـهُ عَامًا. فَقَالَ النَّبِـيُّ صَلَّى اللَّـهُ عَلَيْهِ وَسَـلَّمَ: «لَا صَفَرَ».

6. ಅಬೂದಾವೂದ್ ಹೇಳುತ್ತಾರೆ: ಇಮಾಂ ಮಾಲಿಕ್‌ರೊಂದಿಗೆ "ಸಫರ್ ಇಲ್ಲ" ಎಂಬ ಈ ಹದೀಸಿನ ಬಗ್ಗೆ ಕೇಳಲಾಯಿತು. ಆಗ ಅವರು ಹೇಳುತ್ತಾರೆ: "ಜಾಹಿಲೀಕಾಲದ ಜನರು ಸಫರ್ ತಿಂಗಳನ್ನು ಪವಿತ್ರ ತಿಂಗಳೆಂದು ಪರಿಗಣಿಸುತ್ತಿರಲಿಲ್ಲ. ಅವರು ಒಂದು ವರ್ಷ ಅದನ್ನು ಪವಿತ್ರವೆಂದು ಪರಿಗಣಿಸದಿದ್ದರೆ ಇನ್ನೊಂದು ವರ್ಷ ಅದನ್ನು ಪವಿತ್ರವೆಂದು ಪರಿಗಣಿಸುತ್ತಿದ್ದರು. ಆದಕಾರಣ ಪ್ರವಾದಿ(ﷺ) ಯವರು ಹೇಳಿದರು: "ಸಫರ್ ಇಲ್ಲ."

7. ಇಮಾಂ ಅಲ್‌ಬುಖಾರಿ ತಮ್ಮ ಸಹೀಹ್‌ನಲ್ಲಿ ಹೇಳುತ್ತಾರೆ:

بَابُ: لَا صَفَرَ. وَهُوَ دَاءٌ يَأْخُذُ الْبَطْنَ.

"ಅಧ್ಯಾಯ: ಸಫರ್ ಇಲ್ಲ. ಅದು ಹೊಟ್ಟೆಯಲ್ಲಿ ಉಂಟಾಗುವ ಒಂದು ಕಾಯಿಲೆ."

### ಸಫರ್ ತಿಂಗಳನ್ನು ಅಶುಭವೆನ್ನುವ ಬಿದ್‌ಅತ್

عَنْ أَبِي هُرَيْـرَةَ رَضِيَ اللَّهُ عَنْهُ، عَـنِ النَّبِيِّ صَلَّى اللَّهُ عَلَيْهِ وَسَـلَّمَ قَالَ: «لَا عَـدْوَى وَلَا طِيَرَةَ وَلَا هَامَةَ وَلَا صَفَرَ».

ಅಬೂ ಹುರೈರ(ﷺ) ರಿಂದ ವರದಿ: ಅಲ್ಲಾಹನ ಸಂದೇಶವಾಹಕರು (ﷺ) ಹೇಳಿದರು: "ಅದ್ವಾ ಇಲ್ಲ, ತಿಯರ ಇಲ್ಲ, ಹಾಮ ಇಲ್ಲ, ಸಫರ್ ಇಲ್ಲ." (ಅಲ್‌ಬುಖಾರಿ ಮತ್ತು ಮುಸ್ಲಿಮ್)

ಈ ಹದೀಸಿನ ಬಗ್ಗೆ ವಿದ್ವಾಂಸರಿಗೆ ಭಿನ್ನಾಭಿಪ್ರಾಯವಿದೆ. ಅಂದರೆ ಇಲ್ಲಿ ಅದರ ಉದ್ದೇಶ ವಿರೋಧವೋ ಅಥವಾ ನಿಷೇಧವೋ?

ಇಬ್ನ್ ಕಯ್ಯಿಮ್ ಅಲ್‌ಜೌಝಿಯ್ಯ ಹೇಳುತ್ತಾರೆ:

وَانْسَـلَخَ صَفَرْ، حَلَّـتِ الْعُمْرَةُ لِمَـنِ اعْتَمَرْ. قَدِمَ النَّبِيُّ صَلَّـى اللَّهُ عَلَيْهِ وَسَـلَّمَ وَأَصْحَابُهُ صَبِيحَةَ رَابِعَـةٍ مُهِلِّيـنَ بِالْحَـجِّ. فَأَمَرَهُمْ أَنْ يَجْعَلُوهَا عُمْرَةً. فَتَعَاظَـمَ ذَلِكَ عِنْدَهُمْ فَقَالُوا: يَا رَسُـولَ اللَّـهِ! أَيُّ الْحِلِّ؟ قَالَ: «الْحِـلُّ كُلُّهُ».

4. ಇಬ್ನ್ ಅಬ್ಬಾಸ್(ﷺ) ರಿಂದ ವರದಿ: ಅವರು ಹೇಳುತ್ತಾರೆ: "ಹಜ್ಜ್‌ನ ತಿಂಗಳುಗಳಲ್ಲಿ ಉಮ್ರ ನಿರ್ವಹಿಸುವುದು ಭೂಮಿಯಲ್ಲಿ ಮಾಡುವ ಅತಿದೊಡ್ಡ ದುಷ್ಕರ್ಮವೆಂದು ಅರಬ್ಬಿಗಳು ನಂಬುತ್ತಿದ್ದರು. ಅವರು ಮುಹರ್ರಂ ತಿಂಗಳನ್ನು ಸಫರ್ ತಿಂಗಳಾಗಿ ಮಾಡಿಕೊಳ್ಳುತ್ತಿದ್ದರು. ಅವರು ಹೇಳುತ್ತಿದ್ದರು: "ದಬರ್ ಗುಣವಾದರೆ, ಅಸರ್ ಮಾಯವಾದರೆ, ಸಫರ್ ತಿಂಗಳು ಕಳೆದರೆ, ಉಮ್ರ ನಿರ್ವಹಿಸುವ ಸಮಯವಾಗುತ್ತದೆ."

5. ಹೀಗಿರುವಾಗ ಪ್ರವಾದಿ(ﷺ) ಯವರು ಮತ್ತು ಸಹಾಬಾಗಳು ಹಜ್ಜ್ ನಿರ್ವಹಿಸುವುದಕ್ಕಾಗಿ ಇಹ್ರಾಮ್ ಮಾಡಿ ದುಲ್‌ಹಿಜ್ಜ ನಾಲ್ಕನೇ ದಿನ ಮಕ್ಕಕ್ಕೆ ಬಂದರು. ಆಗ ಪ್ರವಾದಿ(ﷺ) ಯವರು ಅವರೊಡನೆ (ಬಲಿಮೃಗ ತರದವರೊಡನೆ) ಹಜ್ಜ್‌ನಿಂದ ವಿಮುಕ್ತರಾಗಿ ಅದನ್ನು ಉಮ್ರ ಆಗಿ ಪರಿವರ್ತಿಸುವಂತೆ ಹೇಳಿದರು. ಆದರೆ ಅದು ಅವರಿಗೆ ದೊಡ್ಡ ವಿಷಯವಾಗಿ ಕಂಡಿತು. ಅವರು ಕೇಳಿದರು: "ಓ ಅಲ್ಲಾಹನ ಸಂದೇಶವಾಹಕರೇ! ಸಂಪೂರ್ಣ ವಿಮುಕ್ತರಾಗಬೇಕೇ?" ಪ್ರವಾದಿ(ﷺ) ಯವರು ಹೇಳಿದರು: "ಸಂಪೂರ್ಣವಾಗಿ ವಿಮುಕ್ತರಾಗಬೇಕು." (ಅಲ್‌ಬುಖಾರಿ ಮತ್ತು ಮುಸ್ಲಿಮ್)

(ದಬರ್ ಎಂದರೆ ಸಾಮಾನು ಸರಂಜಾಮುಗಳನ್ನು ಹೊರುವ ಮೂಲಕ ಒಂಟೆಗಳ ಬೆನ್ನುಗಳಲ್ಲಿ ಕಾಣಿಸಿಕೊಳ್ಳುವ ಗಾಯಗಳು. ಹಜ್ ಮುಗಿಯುವವರೆಗೂ ಈ ಗಾಯಗಳು ಗುಣವಾಗುತ್ತಿರಲಿಲ್ಲ.

ಅಸರ್ ಎಂದರೆ ಕಲೆ, ಗುರುತು, ಹೆಜ್ಜೆಗುರುತು ಇತ್ಯಾದಿ. ಇಲ್ಲಿ ಅಸರ್ ಎಂದರೆ ಒಂಟೆಗಳು ಮತ್ತು ಯಾತ್ರಾರ್ಥಿಗಳು ಹಜ್ಜ್ ಮುಗಿಸಿ ಮರಳುಗಾಡಿನಲ್ಲಿ ಚಲಿಸುವಾಗ ಮರಳಿನಲ್ಲಿ ಮೂಡುವ ಗುರುತುಗಳು.)

وَهَذَا يَحْتَمِلُ أَنْ يَكُونَ نَفْيًــا، وَأَنْ يَكُونَ نَهْيًا. أَيْ: لَا تَطَيَّرُوا. وَلَكِنْ قَوْلُهُ صَلَّى اللَّهُ عَلَيْهِ وَسَــلَّمَ فِي الْحَدِيثِ: «لَا عَــدْوَى وَلَا صَفَــرَ وَلَا هَامَةَ» يَدُلُّ عَلَى أَنَّ الْمُــرَادَ النَّفْيُ، وَإِبْطَالُ هَــذِهِ الْأُمُورِ الَّتِي كَانَتِ الْجَاهِلِيَّةُ تُعَانِيهَا. وَالنَّفْــيُ فِي هَذَا أَبْلَغُ مِنَ النَّهْيِ. لِأَنَّ النَّفْــيَ يَدُلُّ عَلَى بُطْــلَانِ ذَلِكَ وَعَدَمِ تَأْثِيــرِهِ. وَالنَّهْيُ إِنَّمَا يَدُلُّ عَلَــى الْمَنْعِ مِنْهُ.

“ತಿಯರ ಇಲ್ಲ ಎಂದು ಪ್ರವಾದಿ(ﷺ) ಯವರು ಹೇಳಿದ್ದು ಬಹುಶಃ ಅದರ ಅಸ್ತಿತ್ವವನ್ನು ನಿಷೇಧಿಸುವ ರೂಪದಲ್ಲಾಗಿರಬಹುದು. ಅಥವಾ ಅದನ್ನು ವಿರೋಧಿಸುವ ರೂಪದಲ್ಲಾಗಿರಬಹುದು. ಅಂದರೆ ನೀವು ಶುಭ–ಅಶುಭ ನೋಡಬಾರದು. ಆದರೆ ಪ್ರವಾದಿ(ﷺ) ಯವರು ಹದೀಸಿನಲ್ಲಿ ಹೇಳಿರುವ “ಅದ್ವಾ ಇಲ್ಲ, ಸಫರ್ ಇಲ್ಲ, ಹಾಮ ಇಲ್ಲ” ಎಂಬ ಮಾತು ಇಲ್ಲಿ ಅದರ ಉದ್ದೇಶ ಅವುಗಳ ಅಸ್ತಿತ್ವವನ್ನು ನಿಷೇಧಿಸುವುದಾಗಿದೆ ಮತ್ತು ಜಾಹಿಲೀಕಾಲದ ಜನರು ಆಚರಿಸುತ್ತಿದ್ದ ಈ ಕಾರ್ಯಗಳಿಗೆ ಯಾವುದೇ ಆಧಾರವಿಲ್ಲವೆಂದು ತೋರಿಸುವುದಾಗಿದೆಯೆಂದು ಸೂಚಿಸುತ್ತದೆ. ಇಲ್ಲಿ ನಿಷೇಧವು ವಿರೋಧಕ್ಕಿಂತಲೂ ಹೆಚ್ಚು ಪರಿಣಾಮಕಾರಿ. ಕಾರಣ ನಿಷೇಧವು ಅದರ ಅಸ್ತಿತ್ವವನ್ನೇ ನಿಷೇಧಿಸುತ್ತದೆ ಮತ್ತು ಅದಕ್ಕೆ ಯಾವುದೇ ಪ್ರಭಾವವಿಲ್ಲವೆಂದು ಸೂಚಿಸುತ್ತದೆ. ಆದರೆ ವಿರೋಧವು ಕೇವಲ ಅದರಿಂದ ದೂರವಾಗಬೇಕೆಂದು ಮಾತ್ರ ಸೂಚಿಸುತ್ತದೆ.”

ಇಬ್ನ್ ರಜಬ್ ಹೇಳುತ್ತಾರೆ:

اخْتَلَفُوا فِــي مَعْنَى قَوْلِــهِ: «لَا عَــدْوَى». وَأَظْهَرُ مَــا قِيلَ فِي ذَلِــكَ أَنَّهُ نَفْــيٌ لِمَا كَانَ يَعْتَقِــدُهُ أَهْلُ الْجَاهِلِيَّــةِ مِنْ أَنَّ هَــذِهِ الْأَمْرَاضَ تُعْــدِي بِطَبْعِهَا مِنْ غَيْرِ اعْتِقَــادِ تَقْدِيرِ اللَّــهِ لِذَلِكَ. وَيَــدُلُّ عَلَى هَــذَا قَوْلُهُ صَلَّى اللَّــهُ عَلَيْهِ وَسَــلَّمَ: «فَمَنْ أَعْدَى الْأَوَّلَ؟» يُشِــيرُ إِلَى الْأَوَّلِ إِنَّمَا جَــرِبَ بِقَضَاءِ اللَّهِ وَقَــدَرِهِ. فَكَذَلِكَ الثَّانِــي وَمَا بَعْدَهُ.

“ಅದ್ವಾ ಇಲ್ಲ” ಎಂಬ ಪ್ರವಾದಿ(ﷺ) ಯವರ ವಚನದ ಅರ್ಥದ ಬಗ್ಗೆ ವಿದ್ವಾಂಸರಿಗೆ ಭಿನ್ನಾಭಿಪ್ರಾಯವಿದೆ. ಈ ವಿಷಯದಲ್ಲಿ ಹೇಳಲಾದ ಅತ್ಯಂತ ಸ್ಪಷ್ಟ ಅಭಿಪ್ರಾಯವೇನೆಂದರೆ ಅದೊಂದು ನಿಷೇಧಾತ್ಮಕ ಪ್ರಯೋಗವಾಗಿದೆ. ಕಾರಣ ಈ ಕಾಯಿಲೆಗಳು ನೈಸರ್ಗಿಕವಾಗಿ ಹರಡುತ್ತದೆಯೆಂದು ಜಾಹಿಲೀ ಕಾಲದ ಜನರು ನಂಬುತ್ತಿದ್ದರು. ಇದಕ್ಕೆ ಅಲ್ಲಾಹನ ನಿರ್ಣಯದ ಅಗತ್ಯವಿದೆಯೆಂಬ ವಿಶ್ವಾಸ ಅವರಿಗಿರಲಿಲ್ಲ. “ಹಾಗಾದರೆ ಮೊಟ್ಟಮೊದಲ ಒಂಟೆಗೆ ತುರಿ ಹತ್ತಿಸಿದವರು ಯಾರು?” ಎಂಬ ಪ್ರವಾದಿ(ﷺ) ಯವರ ಮಾತು ಇದನ್ನು ಸೂಚಿಸುತ್ತದೆ. ಮೊಟ್ಟಮೊದಲ ಒಂಟೆಗೆ, ಅದೇ ರೀತಿ ಎರಡನೆಯ ಮತ್ತು ಅದರ ನಂತರದ ಒಂಟೆಗೆ ತುರಿ ಹತ್ತಿದ್ದು ಕೇವಲ ಅಲ್ಲಾಹನ ವಿಧಿ ಮತ್ತು ನಿರ್ಣಯದಿಂದ ಎಂದು ಇದು ಸೂಚಿಸುತ್ತದೆ.”

ಅಲ್ಲಾಹು(ﷻ) ಹೇಳುತ್ತಾನೆ:

﴿مَآ أَصَابَ مِن مُّصِيبَةٍ فِى ٱلْأَرْضِ وَلَا فِىٓ أَنفُسِكُمْ إِلَّا فِى كِتَٰبٍ مِّن قَبْلِ أَن نَّبْرَأَهَآ ۚ إِنَّ ذَٰلِكَ عَلَى ٱللَّهِ يَسِيرٌ ﴿٢٢﴾﴾

“ಭೂಮಿಯಲ್ಲಾಗಲಿ, ನಿಮ್ಮ ದೇಹದಲ್ಲಾಗಲಿ ಯಾವುದೇ ಆಪತ್ತು ಸಂಭವಿಸುವುದಿದ್ದರೂ ನಾವು ಅದನ್ನು ಸೃಷ್ಟಿಸುವುದಕ್ಕೆ ಮುಂಚೆಯೇ ಅದೊಂದು ಗ್ರಂಥದಲ್ಲಿ ದಾಖಲಾಗಿರುತ್ತದೆ.” (ಕುರ್‌ಆನ್ 57:22)

“ಸಫರ್ ಇಲ್ಲ” ಎಂಬ ಪ್ರವಾದಿ(ﷺ) ಯವರ ವಚನದ ಬಗ್ಗೆ ಹೇಳುವುದಾದರೆ ಅದರ ವ್ಯಾಖ್ಯಾನದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ.

**ಮೊದಲನೆಯದಾಗಿ:** ಹಿಂದಿನ ಕಾಲದ ವಿದ್ವಾಂಸರಲ್ಲಿ ಅನೇಕ ಮಂದಿ ಹೇಳುತ್ತಾರೆ,—“ಸಫರ್ ಎಂದರೆ ಹೊಟ್ಟೆಯಲ್ಲಿ ಉಂಟಾಗುವ ಒಂದು ಕಾಯಿಲೆ”.

ಕೆಲವರು ಹೇಳುತ್ತಾರೆ,—“ಅದೊಂದು ಹುಳ. ಅದರಲ್ಲಿ ಹಾವಿನಷ್ಟು ದೊಡ್ಡದೂ ಇದೆ. ಅರಬ್ಬಿಗಳ ನಂಬಿಕೆ ಪ್ರಕಾರ ಅದು ತುರಿಕಜ್ಜಿಗಿಂತಲೂ ಬೇಗ ಹತ್ತಿಕೊಳ್ಳುತ್ತದೆ. ಆದರೆ ಪ್ರವಾದಿ(ﷺ) ಯವರು ಅದರ ಅಸ್ತಿತ್ವವನ್ನು ನಿಷೇಧಿಸಿದರು.” ಇಬ್ನ್ ಉಯಯ್ನ, ಇಮಾಂ ಅಹ್ಮದ್, ಇಮಾಂ ಅಲ್‌ಬುಖಾರಿ ಮತ್ತು ಅತ್ತಬರಿ ಈ

ಅಭಿಪ್ರಾಯವನ್ನು ಹೊಂದಿದ್ದಾರೆ.

ಇತರ ಕೆಲವರು ಹೇಳುತ್ತಾರೆ,—ಸಫರ್ ಎಂದರೆ ಒಂದು ಹಾವು. ಇಲ್ಲಿ ಪ್ರವಾದಿ(ﷺ) ಯವರು ನಿಷೇಧಿಸಿದ್ದು (ಅದರ ಅಸ್ತಿತ್ವವನ್ನಲ್ಲ ಬದಲಾಗಿ) ಅದು ಯಾರಿಗೆ ಹತ್ತುತ್ತದೋ ಅವರು ಸಾಯುತ್ತಾರೆ ಎಂಬ ಜನರ ನಂಬಿಕೆಯನ್ನಾಗಿದೆ. ಅಂದರೆ ಆಯುಷ್ಯ ಮುಗಿಯದೆ ಯಾರೂ ಸಾಯುವುದಿಲ್ಲ ಎಂದು ಪ್ರವಾದಿ(ﷺ) ಯವರು ಅವರ ನಂಬಿಕೆಯನ್ನು ತಿದ್ದುತ್ತಿದ್ದಾರೆ.

ಇದೇ ರೀತಿಯ ವ್ಯಾಖ್ಯಾನ ಜಾಬಿರ್(ؓ) ರಿಂದಲೂ ವರದಿಯಾಗಿದೆ. ಅವರು ಈ ಹದೀಸಿನ ವರದಿಗಾರರಲ್ಲೊಬ್ಬರು.

**ಎರಡನೆಯದಾಗಿ:** ಒಂದು ಗುಂಪು ವಿದ್ವಾಂಸರು ಹೇಳುತ್ತಾರೆ: ಇಲ್ಲಿ ಸಫರ್ ಎಂದರೆ ಸಫರ್ ತಿಂಗಳು. ಆದರೆ ಇದರ ವ್ಯಾಖ್ಯಾನದಲ್ಲಿ ಅವರಿಗೆ ಎರಡು ಅಭಿಪ್ರಾಯಗಳಿವೆ.

1. ಜಾಹಿಲೀಕಾಲದ ಜನರು ತಿಂಗಳುಗಳನ್ನು ಹಿಂದೆ ಮುಂದೆ ಮಾಡುತ್ತಿದ್ದುದ್ದನ್ನು ನಿಷೇಧಿಸುವುದು ಇದರ ಉದ್ದೇಶ. ಅವರು ಮುಹರ್ರಂ ತಿಂಗಳನ್ನು ಪವಿತ್ರವಲ್ಲವೆಂದು ಪರಿಗಣಿಸಿ ಅದರ ಸ್ಥಾನದಲ್ಲಿ ಸಫರ್ ತಿಂಗಳನ್ನು ಪವಿತ್ರವೆಂದು ಪರಿಗಣಿಸುತ್ತಿದ್ದರು. ಇದು ಇಮಾಂ ಮಾಲಿಕ್‌ರವರ ಅಭಿಪ್ರಾಯ.

2. ಇದರ ಉದ್ದೇಶ ಜಾಹಿಲೀಕಾಲದ ಜನರು ಅಶುಭವೆಂದು ಪರಿಗಣಿಸುತ್ತಿದ್ದ ಸಫರ್ ತಿಂಗಳು. ಆದರೆ ಪ್ರವಾದಿ(ﷺ) ಯವರು ಅದರ ಅಸ್ತಿತ್ವವನ್ನು ನಿಷೇಧಿಸಿದರು. ಈ ಅಭಿಪ್ರಾಯವನ್ನು ಇಬ್ನ್ ರಜಬ್ ಅಲ್‌ಹಂಬಲೀ ಪ್ರಬಲವೆಂದಿದ್ದಾರೆ.

ಇಲ್ಲಿ “ಸಫರ್” ಎನ್ನುವುದರ ಉದ್ದೇಶ ಹೊಟ್ಟೆಯಲ್ಲಿರುವ ಆ ಹುಳವಾಗಿರುವ ಸಾಧ್ಯತೆಯೂ ಇದೆ. ಅಂದರೆ ಅವರ ನಂಬಿಕೆ ಪ್ರಕಾರ ತುರಿಕಜ್ಜಿಗಿಂತಲೂ ವೇಗವಾಗಿ ಹತ್ತಿಕೊಳ್ಳುವ ಹುಳ. ಅಥವಾ ಅದರ ಉದ್ದೇಶ ಮುಹರ್ರಂ ತಿಂಗಳ ಪಾವಿತ್ರ್ಯವನ್ನು ಸಫರ್ ತಿಂಗಳಿಗೆ ಮುಂದೂಡುವುದನ್ನಾಗಿರಬಹುದು. ಇದನ್ನು ನಸೀಅ್ ಎಂದು ಕರೆಯಲಾಗುತ್ತದೆ. ಈ ಎರಡು ಸಫರ್‌ಗಳೂ ಆಧಾರರಹಿತವಾಗಿದ್ದು ಅವುಗಳಿಗೆ ಆಧಾರವೇ ಇಲ್ಲ. ಅವುಗಳಲ್ಲಿ ಒಂದಕ್ಕೂ ಸ್ಪಷ್ಟ ಉಲ್ಲೇಖವಿಲ್ಲ.

ಅದೇ ರೀತಿ ಇಲ್ಲಿ “ಸಫರ್” ಎನ್ನುವುದರ ಉದ್ದೇಶ ಸಫರ್ ತಿಂಗಳನ್ನು ಅಶುಭವೆಂದು ಪರಿಗಣಿಸುವುದಾಗಿರಬಹುದು. ಕಾರಣ ಸಫರ್ ತಿಂಗಳನ್ನು ಅಶುಭವೆಂದು ಪರಿಗಣಿಸುವುದು ವಿರೋಧಿಸಲಾದ “ತಿಯರ”ದಲ್ಲಿ (ಶುಭ–ಅಶುಭ ನೋಡುವುದರಲ್ಲಿ) ಒಳಪಡುತ್ತದೆ. ಪ್ರವಾದಿ(ﷺ) ಯವರು ಹೇಳುತ್ತಾರೆ:

«لَا طِيَرَةَ».

“ತಿಯರ ಇಲ್ಲ.”

ಅದೇ ರೀತಿ ಪ್ರವಾದಿ(ﷺ) ಯವರು ಹೇಳುತ್ತಾರೆ:

«الطِّيَرَةُ شِرْكٌ الطِّيَرَةُ شِرْكٌ».

“ತಿಯರ ಶಿರ್ಕ್. ತಿಯರ ಶಿರ್ಕ್.”

ಇದೇ ಸರಿಯಾದ ಅಭಿಪ್ರಾಯವಾದರೆ ಇಲ್ಲಿ “ಸಫರ್ ಇಲ್ಲ” ಎಂಬ ಪ್ರವಾದಿ(ﷺ) ಯವರ ಮಾತಿನ ಅರ್ಥ ಮೊತ್ತವಾಗಿ ಹೇಳಿ ನಂತರ ವಿಶೇಷವಾಗಿ ಹೇಳುವುದರಲ್ಲಿ ಒಳಪಡುತ್ತದೆ. ಅಂದರೆ ಅವರು “ತಿಯರ ಇಲ್ಲ” (ಶುಭ–ಅಶುಭ ನೋಡುವುದು ಇಲ್ಲ) ಎಂದು ಮೊತ್ತವಾಗಿ ಹೇಳಿ ನಂತರ ಅದರಲ್ಲಿ ಸೇರಿದ “ಸಫರ್” ಅನ್ನು ಇಲ್ಲವೆಂದು ವಿಶೇಷವಾಗಿ ಹೇಳಿರಬಹುದು. ಏಕೆಂದರೆ ಸಫರ್ ತಿಂಗಳನ್ನು ಅಶುಭವೆಂದು ಪರಿಗಣಿಸುವುದು ಅರಬ್ಬಿಗಳ ಮಧ್ಯೆ ಪ್ರಸಿದ್ಧವಾಗಿತ್ತು.

ಆದ್ದರಿಂದ ಇಲ್ಲಿ “ಸಫರ್ ಇಲ್ಲ” ಎಂಬ ನಿಷೇಧವು—ಹೆಚ್ಚು ಬಲ್ಲವನು ಅಲ್ಲಾಹು—ಪ್ರವಾದಿ(ﷺ) ಯವರ ವಚನವನ್ನು ವಿದ್ವಾಂಸರು ವ್ಯಾಖ್ಯಾನ ಮಾಡಿದ ಎಲ್ಲ ಅರ್ಥಗಳನ್ನೂ ಒಳಗೊಳ್ಳುತ್ತದೆ. ಕಾರಣ ಅವೆಲ್ಲವೂ ಆಧಾರರಹಿತ. ಅವುಗಳಲ್ಲಿ ಯಾವುದಕ್ಕೂ ಯಾವುದೇ ಆಧಾರವೋ ಸ್ಪಷ್ಟ ಉಲ್ಲೇಖವೋ ಇಲ್ಲ.

ಹೆಚ್ಚಿನ ಅವಿವೇಕಿಗಳೂ ಸಫರ್ ತಿಂಗಳನ್ನು ಅಶುಭವೆಂದು ಪರಿಗಣಿಸುತ್ತಾರೆ. ಕೆಲವೊಮ್ಮೆ ಅವರು ಅದರಲ್ಲಿ ಪ್ರಯಾಣ ಮಾಡುವುದನ್ನೂ ವಿರೋಧಿಸುತ್ತಾರೆ. ಈ ಅವಿವೇಕಿಗಳಲ್ಲಿ ಕೆಲವರು ಹೇಳುತ್ತಾರೆ:

“ಕೆಲವು ಆರಿಫೀನ್‌ಗಳು ಹೇಳುವಂತೆ ಪ್ರತಿವರ್ಷ ಮೂರು ಲಕ್ಷದ ಇಪ್ಪತ್ತು ಸಾವಿರ ಆಪತ್ತುಗಳು ಇಳಿಯುತ್ತವೆ. ಅವೆಲ್ಲವೂ ಸಫರ್ ತಿಂಗಳ ಕೊನೆಯ ಬುಧವಾರ ಇಳಿಯುತ್ತವೆ. ಆದ್ದರಿಂದ ಆ ದಿನ ವರ್ಷದಲ್ಲೇ ಅತ್ಯಂತ ಕಷ್ಟದ ದಿನ. ಆದ್ದರಿಂದ ಯಾರಾದರೂ ಆ ದಿನ ನಾಲ್ಕು ರಕ್‌ಅತ್ ನಮಾಝ್ ನಿರ್ವಹಿಸಿ, ಪ್ರತಿ ರಕ್‌ಅತ್‌ನಲ್ಲೂ

ಸೂರ ಅಲ್‌ಫಾತಿಹ ಒಂದು ಸಲ, ಸೂರ ಅಲ್‌ಕೌಸರ್ ಹದಿನೇಳು ಸಲ, ಸೂರ ಅಲ್‌ಇಖ್ಲಾಸ್ ಹದಿನೈದು ಸಲ, ಮುಅವ್ವಿಝತೈನ್ ಒಂದು ಸಲ ಪಾರಾಯಣ ಮಾಡಿ, ಸಲಾಂ ಹೇಳಿದ ನಂತರ ಈ ಕೆಳಗಿನ ಪ್ರಾರ್ಥನೆಯನ್ನು ಪ್ರಾರ್ಥಿಸಿದರೆ ಅಲ್ಲಾಹು ತನ್ನ ಔದಾರ್ಯದಿಂದ ಆ ದಿನ ಇಳಿಯುವ ಸರ್ವ ಆಪತ್ತುಗಳಿಂದಲೂ ಅವನನ್ನು ರಕ್ಷಿಸುತ್ತಾನೆ. ಆ ವರ್ಷ ಅವನಿಗೆ ಯಾವುದೇ ಆಪತ್ತೂ ಸಂಭವಿಸುವುದಿಲ್ಲ. ಆ ಪ್ರಾರ್ಥನೆ ಹೀಗಿದೆ:

بَعْدَ الْبَسْمَلَةِ... اللَّهُمَّ يَا شَدِيدَ الْقُوَّةِ، وَيَا شَدِيدَ الْمِحَالِ، يَا عَزِيزُ، يَا مَنْ ذَلَّتْ لِعِزَّتِكَ جَمِيعُ خَلْقِكَ، اكْفِنِي مِنْ شَرِّ خَلْقِكَ. يَا مُحْسِنُ، يَا مُجَمِّلُ، يَا مُتَفَضِّلُ، يَا مُنْعِمُ، يَا مُتَكَرِّمُ، يَا مَنْ لَا إِلَهَ إِلَّا أَنْتَ، ارْحَمْنِي بِرَحْمَتِكَ يَا أَرْحَمَ الرَّاحِمِينَ. اللَّهُمَّ بِسِرِّ الْحَسَنِ وَأَخِيهِ وَجَدِّهِ وَأَبِيهِ وَأُمِّهِ وَبَنِيهِ، اكْفِنِي شَرَّ هَذَا الْيَوْمِ وَمَا يَنْزِلُ فِيهِ. يَا كَافِيَ الْمُهِمَّاتِ وَيَا دَافِعَ الْبَلِيَّاتِ. فَسَيَكْفِيكَهُمُ اللَّهُ وَهُوَ السَّمِيعُ الْعَلِيمُ. وَصَلَّى اللَّهُ عَلَى سَيِّدِنَا مُحَمَّدٍ وَعَلَى آلِهِ وَصَحْبِهِ أَجْمَعِينَ.

ಅದೇ ರೀತಿ ಕೆಲವು ಜನರು ಸಫರ್ ತಿಂಗಳ ಕೊನೆಯ ಬುಧವಾರ ಮಗ್ರಿಬ್ ಮತ್ತು ಇಶಾ ನಮಾಝ್‌ಗಳ ಮಧ್ಯೆ ಮಸೀದಿಗಳಲ್ಲಿ ಚಕ್ರಾಕಾರದಲ್ಲಿ ಕುಳಿತುಕೊಳ್ಳುತ್ತಾರೆ. ನಂತರ ಅವರಲ್ಲೊಬ್ಬರು ಪ್ರವಾದಿಗಳ ಮೇಲೆ ಸಲಾಂ ಹೇಳಲಾದ ಏಳು ಆಯತ್‌ಗಳನ್ನು ಕಾಗದದಲ್ಲಿ ಬರೆಯುತ್ತಾರೆ. ಉದಾ: ಈ ಕೆಳಗಿನ ಅಲ್ಲಾಹನ ವಚನ:

﴿سَلَٰمٌ عَلَىٰ نُوحٍ فِي ٱلۡعَٰلَمِينَ ٧٩﴾

ಸರ್ವಲೋಕದವರಲ್ಲಿ ನೂಹ್‌ರ ಮೇಲೆ ಶಾಂತಿಯಿರಲಿ. (ಕುರ್‌ಆನ್ 37:79)

ನಂತರ ಅವರು ಅದನ್ನು ಒಂದು ಬಟ್ಟಲಲ್ಲಿಟ್ಟು ಅದರ ನೀರನ್ನು ಕುಡಿಯುತ್ತಾರೆ. ಅವರು ಬರೆದ ಆ ವಾಕ್ಯದ ರಹಸ್ಯವು ಆ ಸಮಯದಲ್ಲಿ ಅವರ ನೆರವಿಗೆ ಬರುತ್ತದೆಯೆಂದು ಅವರು ನಂಬುತ್ತಾರೆ. ನಂತರ ಅದನ್ನು ಪರಸ್ಪರ ಬಟ್ಟಲನ್ನು ಬದಲಾಯಿಸಿ ಮನೆಗೆ ಒಯ್ಯುತ್ತಾರೆ.

ಇದೇ ರೀತಿಯ ಅಪಶಕುನ ಕೆಲವು ಮುಸ್ಲಿಂ ದೇಶಗಳಲ್ಲೂ ಕಾಣಬಹುದು. ಅವರು ಬುಧವಾರ ರೋಗಿಗಳನ್ನು ಸಂದರ್ಶಿಸು-ವುದಿಲ್ಲ. ಅವರ ಪ್ರಕಾರ ಆ ದಿನ ಶುಭದಿನವಲ್ಲ.

ಸಫರ್ ತಿಂಗಳನ್ನು ಅಥವಾ ಅದರ ಯಾವುದಾದರೂ ಒಂದು ದಿನವನ್ನು ಅಶುಭವೆಂದು ನಂಬುವುದು ವಿರೋಧಿಸಲಾದ "ತಿಯರ"ದಲ್ಲಿ (ಶುಭ–ಅಶುಭ ನೋಡುವುದರಲ್ಲಿ) ಒಳಪಡುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ. ಪ್ರವಾದಿ(ﷺ) ಯವರು ಹೇಳುತ್ತಾರೆ:

«لَا عَدْوَى وَلَا طِيَرَةَ وَلَا هَامَةَ وَلَا صَفَرَ».

"ಅದ್ವಾ ಇಲ್ಲ, ತಿಯರ ಇಲ್ಲ, ಹಾಮ ಇಲ್ಲ, ಸಫರ್ ಇಲ್ಲ." (ಅಲ್‌ಬುಖಾರಿ ಮತ್ತು ಮುಸ್ಲಿಮ್)

ಪ್ರವಾದಿ(ﷺ) ಯವರು ಹೇಳುತ್ತಾರೆ:

«لَا عَدْوَى وَلَا طِيَرَةَ، وَيُعْجِبُنِي الْفَأْلُ».

"ಅದ್ವಾ ಇಲ್ಲ, ತಿಯರ ಇಲ್ಲ, ಆದರೆ ಫಅ್‌ಲ್ ನನಗಿಷ್ಟ."

ಸಹಾಬಾಗಳು ಕೇಳುತ್ತಾರೆ,—"ಫಅ್‌ಲ್ ಎಂದರೇನು?"

ಪ್ರವಾದಿ(ﷺ) ಯವರು ಹೇಳುತ್ತಾರೆ:

«كَلِمَةٌ طَيِّبَةٌ».

"ಒಳ್ಳೆಯ ಮಾತು."

ಪ್ರವಾದಿ(ﷺ) ಯವರು ಹೇಳುತ್ತಾರೆ:

«الطِّيَرَةُ شِرْكٌ الطِّيَرَةُ شِرْكٌ».

"ತಿಯರ ಶಿರ್ಕ್. ತಿಯರ ಶಿರ್ಕ್."

ಪ್ರವಾದಿ(ﷺ) ಯವರು ಹೇಳುತ್ತಾರೆ:

«مَنْ رَدَّتْهُ الطِّيَرَةُ مِنْ حَاجَتِهِ فَقَدْ أَشْرَكَ».

"ಯಾರನ್ನು ತಿಯರ ಅವನ ಉದ್ದೇಶವನ್ನು ಬಿಟ್ಟು ಮರಳುವಂತೆ ಮಾಡುತ್ತದೋ ಅವನು ಶಿರ್ಕ್ ಮಾಡಿದನು."

ಸಹಾಬಾಗಳು ಕೇಳುತ್ತಾರೆ,—" ಅದರ ಪ್ರಾಯಶ್ಚಿತ್ತವೇನು?"

ಪ್ರವಾದಿ(ﷺ) ಯವರು ಹೇಳುತ್ತಾರೆ:

«اللَّهُمَّ لَا خَيْرَ إِلَّا خَيْرُكَ وَلَا طَيْرَ إِلَّا طَيْرُكَ وَلَا إِلَهَ غَيْرُكَ».

"ಓ ಅಲ್ಲಾಹ್! ನಿನ್ನ ಒಳಿತಲ್ಲದೆ ಬೇರೆ ಒಳಿತಿಲ್ಲ. ನಿನ್ನ ಅಶುಭ-ವಲ್ಲದೆ ಬೇರೆ ಅಶುಭವಿಲ್ಲ. ನೀನಲ್ಲದೆ ಬೇರೆ ಆರಾಧ್ಯನಿಲ್ಲ ಎಂದು ಹೇಳುವುದು."

"ತಿಯರ"ವನ್ನು (ಶುಭ–ಅಶುಭ ನೋಡುವುದನ್ನು) ವಿರೋಧಿಸುವ ಇಂತಹ ಇನ್ನೂ ಅನೇಕ ಹದೀಸ್‌ಗಳು ವರದಿಯಾಗಿವೆ.

ಅಶುಭವನ್ನು ಯಾವುದಾದರೂ ಒಂದು ಕಾಲಕ್ಕೆ ಮಾತ್ರ, ಅಂದರೆ ಸಫರ್ ತಿಂಗಳಿಗೆ ಮಾತ್ರ ಸೀಮಿತಗೊಳಿಸುವುದು ಸರಿಯಲ್ಲ. ಏಕೆಂದರೆ ಕಾಲಗಳೆಲ್ಲವೂ ಅಲ್ಲಾಹನ ಸೃಷ್ಟಿ. ಅದರಲ್ಲಿ ಮನುಷ್ಯ ಕರ್ಮಗಳು ಉಂಟಾಗುತ್ತವೆ. ಮನುಷ್ಯನು ಅಲ್ಲಾಹನ ಆಜ್ಞಾಪಾಲನೆ ಮಾಡುತ್ತಾ ಕಳೆಯುವ ಕಾಲವು ಅವನ ಪಾಲಿಗೆ ಶುಭಕಾಲವಾಗಿದೆ. ಅದೇ ರೀತಿ ಅಲ್ಲಾಹನ ಆಜ್ಞೋಲ್ಲಂಘನೆ ಮಾಡುತ್ತಾ ಕಳೆಯುವ ಕಾಲವು ಅವನ ಪಾಲಿಗೆ ಅಶುಭಕಾಲವಾಗಿದೆ.

ಆದ್ದರಿಂದ ಅಲ್ಲಾಹನ ಆಜ್ಞೋಲ್ಲಂಘನೆ ಮಾಡುವುದು ಮತ್ತು ಪಾಪವೆಸಗುವುದೇ ನಿಜವಾದ ಅಶುಭ. ಕಾರಣ ಅದು ಅಲ್ಲಾಹನಿಗೆ ಕೋಪ ತರಿಸುತ್ತದೆ. ಅಲ್ಲಾಹು ಒಬ್ಬ ದಾಸನ ಮೇಲೆ ಕೋಪ ಮಾಡಿಕೊಂಡರೆ ಅವನು ಇಹಲೋಕದಲ್ಲೂ ಪರಲೋಕದಲ್ಲೂ ದೌರ್ಭಾಗ್ಯವಂತನಾಗುತ್ತಾನೆ. ಅದೇ ರೀತಿ ಅಲ್ಲಾಹು ಒಬ್ಬ ದಾಸನ ಬಗ್ಗೆ ತೃಪ್ತನಾದರೆ ಅವನು ಇಹಲೋಕದಲ್ಲೂ ಪರಲೋಕದಲ್ಲೂ ಸೌಭಾಗ್ಯವಂತನಾಗುತ್ತಾನೆ.

ಆಜ್ಞೋಲ್ಲಂಘನೆ ಮಾಡುವವನು ಸ್ವತಃ ತನಗೂ ಇತರರಿಗೂ ಅಶುಭವಾಗಿದ್ದಾನೆ. ಏಕೆಂದರೆ, ಅವನ ಕಾರಣದಿಂದ ಆಪತ್ತು ಎರಗಿ ಅದು ಎಲ್ಲ ಜನರನ್ನೂ ಆವರಿಸಿಕೊಳ್ಳುವುದನ್ನು ನಿಷೇಧಿಸಲಾಗದು. ವಿಶೇಷವಾಗಿ ದುಷ್ಕರ್ಮಗಳನ್ನು ವಿರೋಧಿಸದ ಜನರನ್ನು. ಆದ್ದರಿಂದ ಅಂತಹ ವ್ಯಕ್ತಿಯಿಂದ ದೂರವಿರುವುದು ಕ್ಷೇಮ.

ಪ್ರವಾದಿ(ﷺ) ಯವರು ಹೇಳುತ್ತಾರೆ:

«لَا عَدْوَى وَلَا طِيَرَةَ، وَالشُّؤْمُ فِي ثَلَاثٍ: الْمَرْأَةِ وَالدَّارِ وَالدَّابَّةِ».

"ಅದ್ವಾ ಇಲ್ಲ, ತಿಯರ ಇಲ್ಲ. ಆದರೆ ಅಶುಭವು ಮೂರು ವಸ್ತುಗಳ-ಲ್ಲಿದೆ. ಮಹಿಳೆ, ಮನೆ ಮತ್ತು ಜಾನುವಾರು." (ಅಲ್‌ಬುಖಾರಿ)

ಈ ಹದೀಸಿನ ಅರ್ಥವೇನೆಂಬ ಬಗ್ಗೆ ವಿದ್ವಾಂಸರಿಗೆ ಭಿನ್ನಾಭಿಪ್ರಾಯವಿದೆ.

1. ಇದು ಪ್ರವಾದಿ(ﷺ) ಯವರ ಮಾತೆಂಬುದನ್ನು ಆಯಿಶಾ(ರ) ನಿರಾಕರಿಸುತ್ತಿದ್ದರು. ಅವರ ಪ್ರಕಾರ ಪ್ರವಾದಿ(ﷺ) ರವರು ಹೇಳಿದ್ದು ಹೀಗೆ: "ಮಹಿಳೆ, ಮನೆ ಮತ್ತು ಜಾನುವಾರುಗಳಲ್ಲಿ ಅಶುಭವಿದೆ ಎಂದು ಜಾಹಿಲೀಕಾಲದ ಜನರು ಹೇಳುತ್ತಿದ್ದರು".

   ನಂತರ ಆಯಿಶಾ(ರ) ಈ ಕೆಳಗಿನ ಆಯತ್ತನ್ನು ಪಾರಾಯಣ ಮಾಡುತ್ತಾರೆ:

   ﴿مَا أَصَابَ مِن مُّصِيبَةٍ فِي الْأَرْضِ وَلَا فِي أَنفُسِكُمْ إِلَّا فِي كِتَابٍ مِّن قَبْلِ أَن نَّبْرَأَهَا ۚ إِنَّ ذَٰلِكَ عَلَى اللَّهِ يَسِيرٌ ﴿٢٢﴾﴾

   "ಭೂಮಿಯಲ್ಲಾಗಲಿ, ನಿಮ್ಮ ದೇಹದಲ್ಲಾಗಲಿ ಯಾವುದೇ ಆಪತ್ತು ಸಂಭವಿಸುವುದಿದ್ದರೂ ನಾವು ಅದನ್ನು ಸೃಷ್ಟಿಸುವುದಕ್ಕೆ ಮುಂಚೆಯೇ ಅದೊಂದು ಗ್ರಂಥದಲ್ಲಿ ದಾಖಲಾಗಿರುತ್ತದೆ." (ಕುರ್‌ಆನ್ 57:22) (ಅಹ್ಮದ್)

   ಮುಅಮ್ಮರ್ ಹೇಳುತ್ತಾರೆ: ಈ ಹದೀಸನ್ನು ವ್ಯಾಖ್ಯಾನಿಸು-ವವರು ಹೀಗೆ ಹೇಳುವುದನ್ನು ನಾನು ಕೇಳಿದ್ದೇನೆ: "ಹೆಣ್ಣು

ಅಶುಭವಾಗುವುದು ಬಂಜೆಯಾಗಿದ್ದರೆ. ಕುದುರೆ ಅಶುಭ-ವಾಗುವುದು ಅದು ಅಲ್ಲಾಹನ ಮಾರ್ಗದಲ್ಲಿ ಯುದ್ಧಕ್ಕೆ ಹೋಗದಿದ್ದರೆ. ಮನೆ ಅಶುಭವಾಗುವುದು ಅದರ ನೆರೆಯವರು ಕೆಟ್ಟವರಾಗಿದ್ದರೆ."

2. ವಿದ್ವಾಂಸರಲ್ಲಿ ಕೆಲವರು ಹೀಗೆ ಹೇಳುತ್ತಾರೆ: ಪ್ರವಾದಿ(ﷺ) ಯವರು ಹೀಗೆ ಹೇಳಿದ್ದಾಗಿ ವರದಿಯಾಗಿದೆ:

«لَا شُؤْمَ. وَقَدْ يَكُونُ الْيُمْنُ فِي الدَّارِ وَالْمَرْأَةِ وَالْفَرَسِ».

"ಅಶುಭ ಎನ್ನುವುದು ಇಲ್ಲ. ಆದರೆ ಮನೆ, ಹೆಣ್ಣು ಮತ್ತು ಕುದುರೆಯಲ್ಲಿ ಶುಭವಿರುವ ಸಾಧ್ಯತೆಯಿದೆ." (ಅತ್ತಿರ್ಮಿದಿ)

**ಪರಿಶೀಲನೆ:** ಈ ಮೂರು ವಸ್ತುಗಳಲ್ಲಿ ಅಶುಭವನ್ನು ದೃಢಪಡಿಸು-ವುದು ರೋಗಿಯನ್ನು ಆರೋಗ್ಯವಂತರ ನಡುವೆ ತರುವುದು, ಕುಷ್ಟ-ರೋಗವಿರುವ ಸ್ಥಳದಿಂದ, ಪ್ಲೇಗ್ ಇರುವ ಪ್ರದೇಶದಿಂದ ಪಲಾಯನ ಮಾಡುವುದು ಮುಂತಾದವುಗಳನ್ನು ವಿರೋಧಿಸಿರುವಂತೆಯಾಗಿ-ದೆಯೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. ಅಂದರೆ ಈ ಮೂರು ವಸ್ತುಗಳಲ್ಲಿ ಅಶುಭವಿಲ್ಲ. ಆದರೆ ಈ ಮೂರು ವಸ್ತುಗಳು ಅಶುಭಕ್ಕೆ ಕಾರಣವಾಗುತ್ತದೆ. ಅಲ್ಲಾಹು ಅವುಗಳ ಮೂಲಕ ಶುಭ ಅಥವಾ ಅಶುಭವನ್ನು ನಿರ್ಣಯಿಸಿ ಜೋಡಿಸುತ್ತಾನೆ.

ಈ ಮೂರು ವಸ್ತುಗಳಲ್ಲಿರುವ ಅಶುಭವು ಅದನ್ನು ಅಶುಭವೆಂದು ಪರಿಗಣಿಸುವವರಿಗೆ ಮಾತ್ರ ತಗಲುತ್ತದೆ. ತನ್ಮೂಲಕ ಅವರಿಗೆ ಅಶುಭ ಬಾಧಿಸುತ್ತದೆ. ಆದರೆ ಯಾರು ಅಲ್ಲಾಹನಲ್ಲಿ ತವಕ್ಕುಲ್ ಮಾಡುತ್ತಾರೋ ಮತ್ತು ಇವುಗಳನ್ನು ಅಶುಭವೆಂದು ಪರಿಗಣಿ-ಸುವುದಿಲ್ಲವೋ ಅವರಿಗೆ ಅದು ಅಶುಭವಲ್ಲ. ಅನಸ್(ؓ) ರವರ ಹದೀಸ್ ಇದನ್ನು ಸೂಚಿಸುತ್ತದೆ.

«الطِّيَرَةُ عَلَى مَنْ تَطَيَّرَ».

"ಶುಭ–ಅಶುಭವಿರುವುದು ಶುಭ–ಅಶುಭ ನೋಡುವವರಿಗೆ ಮಾತ್ರ."

ಕೆಲವೊಮ್ಮೆ ಮನುಷ್ಯನು ಯಾವುದನ್ನು ಅಶುಭವೆಂದು ಭಾವಿಸುತ್ತಾನೋ ಅದನ್ನೇ ಅಲ್ಲಾಹು ಅವನಿಗೆ ಆಪತ್ತುಂಟಾಗಲು ಕಾರಣವಾಗಿಸುತ್ತಾನೆ. ಅದೇ ರೀತಿ ಅಲ್ಲಾಹನಲ್ಲಿ ಭರವಸೆಯಿಟ್ಟು ತವಕ್ಕುಲ್ ಮಾಡುವುದು, ಅವನನ್ನು ಮಾತ್ರ ಭಯಪಡುವುದು, ಅವನಲ್ಲಿ ಮಾತ್ರ ನಿರೀಕ್ಷೆಯಿಡುವುದು ಅಶುಭವೆಂದು ಭಾವಿಸಲಾಗುವ ಕೆಡುಕುಗಳನ್ನು ದೂರಗೊಳಿಸುವ ಪ್ರಮುಖ ಮಾರ್ಗವಾಗಿದೆ.

ಶುಭ–ಅಶುಭ ನೋಡುವುದು ಅಲ್ಲಾಹನಲ್ಲಿ ಶಿರ್ಕ್ ಮಾಡುವುದು, ಅವನಲ್ಲದವರನ್ನು ಭಯಪಡುವುದು ಮತ್ತು ಅವನಲ್ಲದವರಲ್ಲಿ ಭರವಸೆಯಿಡುವುದು ಮುಂತಾದವುಗಳನ್ನು ಒಳಗೊಂಡಿದೆ. ಆದ್ದರಿಂದ ಶುಭ–ಅಶುಭಗಳನ್ನು ನಂಬುವವನು ಕೆಡುಕು ಮತ್ತು ಆಪತ್ತುಗಳಿಗೆ ಸುಲಭವಾಗಿ ಬಲಿಯಾಗುತ್ತಾನೆ. ಅದರಿಂದ ಹೊರಬರಲು ಹೋರಾಡುತ್ತಾನೆ. ಕಾರಣ ಅವನು ತೌಹೀದ್ ಮತ್ತು ತವಕ್ಕುಲ್‌ನ ಗುರಾಣಿಯನ್ನು ಧರಿಸಿಲ್ಲ.

ಮನಸ್ಸು ಯಾವಾಗಲೂ ಶುಭ–ಅಶುಭ ನೋಡುವುದನ್ನು ಆಸೆಪ-ಡುತ್ತದೆ. ಆದರೆ ಪ್ರಬಲ ವಿಶ್ವಾಸವನ್ನು ಹೊಂದಿರುವ ವಿಶ್ವಾಸಿ ಅಲ್ಲಾಹನಲ್ಲಿ ತವಕ್ಕುಲ್ ಮಾಡುವ ಮೂಲಕ ಆ ವಿಚಾರವನ್ನು ದೂರಗೊಳಿಸುತ್ತಾನೆ. ಅಲ್ಲಾಹನ ಮೇಲೆ ಮಾತ್ರ ತವಕ್ಕುಲ್ ಮಾಡುವವರಿಗೆ ಅಲ್ಲಾಹು ಮಾತ್ರ ಸಾಕು.

ಅಲ್ಲಾಹು(ﷻ) ಹೇಳುತ್ತಾನೆ:

﴿فَإِذَا قَرَأْتَ ٱلْقُرْءَانَ فَٱسْتَعِذْ بِٱللَّهِ مِنَ ٱلشَّيْطَٰنِ ٱلرَّجِيمِ ﴿٩٨﴾ إِنَّهُۥ لَيْسَ لَهُۥ سُلْطَٰنٌ عَلَى ٱلَّذِينَ ءَامَنُوا۟ وَعَلَىٰ رَبِّهِمْ يَتَوَكَّلُونَ ﴿٩٩﴾ إِنَّمَا سُلْطَٰنُهُۥ عَلَى ٱلَّذِينَ يَتَوَلَّوْنَهُۥ وَٱلَّذِينَ هُم بِهِۦ مُشْرِكُونَ ﴿١٠٠﴾﴾

"ನೀನು ಕುರ್‌ಆನ್ ಪಾರಾಯಣ ಮಾಡುವಾಗ ಬಹಿಷ್ಕೃತ ಶೈತಾನನ ವಿರುದ್ಧ ಅಲ್ಲಾಹನಲ್ಲಿ ರಕ್ಷೆ ಬೇಡು. ವಿಶ್ವಾಸವಿಟ್ಟವರ ಮೇಲೆ ಮತ್ತು ತಮ್ಮ ರಬ್ಬಿನಲ್ಲಿ ತವಕ್ಕುಲ್ ಮಾಡುವವರ ಮೇಲೆ ಅವನಿಗೆ ಯಾವುದೇ ಅಧಿಕಾರವಿಲ್ಲ. ಅವನಿಗೆ ಅಧಿಕಾರವಿರುವುದು ಅವನನ್ನು ರಕ್ಷಕನನ್ನಾಗಿ ಮಾಡಿಕೊಳ್ಳುವವರು ಮತ್ತು ಅವನನ್ನು ಅಲ್ಲಾಹನಿಗೆ ಪಾಲುದಾರನನ್ನಾಗಿ ಮಾಡುವವರ ಮೇಲೆ ಮಾತ್ರ." (ಕುರ್‌ಆನ್ 16:98-100)

ಇಬ್ನುಲ್ ಕಯ್ಯಿಮ್ ಅಲ್‌ಜೌಝಿಯ್ಯ ಹೇಳುತ್ತಾರೆ:

"ಮೂರು ವಸ್ತುಗಳಲ್ಲಿ ಅಶುಭವಿರಬಹುದೆಂಬ ಪ್ರವಾದಿ(ﷺ)ಯವರ ಮಾತಿನಿಂದ ಅವರು ನಿಷೇಧಿಸಿದ ಶುಭ–ಅಶುಭ ನೋಡುವುದನ್ನು ದೃಢೀಕರಿಸಲಾಗದು. ಅವರ ಮಾತಿನ ಆತ್ಯಂತಿಕ ಉದ್ದೇಶವೇನೆಂದರೆ ಆ ವಸ್ತುಗಳನ್ನು ಸಮೀಪಿಸುವ ಅಥವಾ ಅವುಗಳ ಜೊತೆಗೆ ವಾಸಿಸುವ ಕೆಲವು ಜನರಿಗೆ ಅವುಗಳ ಮೂಲಕ ಕೆಲವು ಅಶುಭಗಳನ್ನು ಅಲ್ಲಾಹು ಸೃಷ್ಟಿಸಲೂ ಬಹುದು ಎಂದಾಗಿದೆ. ಅದೇ ರೀತಿ ಅವುಗಳನ್ನು ಸಮೀಪಿಸುವ ಇತರ ಕೆಲವು ಜನರಿಗೆ ಆ ಅಶುಭಗಳು ಉಂಟಾಗದಂತೆ ಅವುಗಳಲ್ಲಿ ಕೆಲವು ಅನುಗ್ರಹಗಳನ್ನು ಅಲ್ಲಾಹು ಸೃಷ್ಟಿಸಲೂ ಬಹುದು.

ಇದು ಹೇಗೆಂದರೆ ಅಲ್ಲಾಹು(ﷻ) ಕೆಲವು ಪೋಷಕರಿಗೆ ಅನುಗ್ರಹಪೂರ್ಣ ಮಗುವನ್ನು ನೀಡುತ್ತಾನೆ ಮತ್ತು ಅವರು ಅದರ ಮುಖದಲ್ಲಿ ಒಳಿತನ್ನು ಕಾಣುತ್ತಾರೆ. ಆದರೆ ಬೇರೆ ಕೆಲವು ಪೋಷಕರಿಗೆ ಅಂತಹ ಮಗುವನ್ನು ನೀಡುವುದಿಲ್ಲ. ಮನೆ, ಹೆಣ್ಣು ಮತ್ತು ಕುದುರೆಯ ಸ್ಥಿತಿಯು ಕೂಡ ಇದೇ ರೀತಿಯಾಗಿದೆ. ಅದರೊಂದಿಗೆ ವಾಸಿಸುವವರಿಗೆ ಅಲ್ಲಾಹು(ﷻ) ಕೆಲವು ಒಳಿತು ಮತ್ತು ಕೆಡುಕುಗಳನ್ನು ಸೃಷ್ಟಿಸುತ್ತಾನೆ. ಅದರಿಂದ ಅವರಿಗೆ ಶುಭ–ಸಮೃದ್ಧಿಗಳು ಲಭ್ಯವಾಗುತ್ತವೆ. ಅದೇ ರೀತಿ ಕೆಲವನ್ನು ಅಶುಭವನ್ನಾಗಿ ಸೃಷ್ಟಿಸುತ್ತಾನೆ. ಅದನ್ನು ಸಮೀಪಿಸುವವರಿಗೆ ಅದರಿಂದ ಅಶುಭವುಂಟಾಗುತ್ತದೆ. ಇವೆಲ್ಲವೂ ಅಲ್ಲಾಹನ ವಿಧಿ–ನಿರ್ಣಯಗಳಿಗೆ ಅನುಗುಣವಾಗಿ ನಡೆಯುತ್ತದೆ.

ಅವನು ಇತರೆಲ್ಲ ಕಾರಣಗಳನ್ನು ಸೃಷ್ಟಿಸಿ ಅವುಗಳನ್ನು ಅವುಗಳಿಗೆ ವಿರುದ್ಧವಾದ ಮತ್ತು ವಿಭಿನ್ನವಾದ ಕಾರ್ಯಕಾರಣಗಳೊಂದಿಗೆ ಜೋಡಿಸಿದಂತೆ ಇದನ್ನೂ ಜೋಡಿಸುತ್ತಾನೆ. ಉದಾ: ಅವನು ಕಸ್ತೂರಿ ಮುಂತಾದ ಸುಗಂಧ ಬೀರುವ ವಸ್ತುಗಳನ್ನು ಸೃಷ್ಟಿಸುತ್ತಾನೆ. ಅದರ ಸಂಪರ್ಕದಲ್ಲಿರುವ ಜನರು ಅದರ ಮಾಧುರ್ಯವನ್ನು ಅನುಭವಿಸುತ್ತಾರೆ. ಅದಕ್ಕೆ ವಿರುದ್ಧವಾದ ರೀತಿಯಲ್ಲಿ ಅವನು ಕೆಲವು ದುರ್ಗಂಧ ಬೀರುವ ವಸ್ತುಗಳನ್ನೂ ಸೃಷ್ಟಿಸಿ ಅದರ ಸಂಪರ್ಕದಲ್ಲಿರುವ ಜನರು ಅದರಿಂದಾಗಿ ಕಷ್ಟಪಡುವಂತೆ ಮಾಡುತ್ತಾನೆ. ಈ ಎರಡು ವಿಧಗಳ ನಡುವೆಯಿರುವ ವ್ಯತ್ಯಾಸವನ್ನು ಇಂದ್ರಿಯಗಳ ಮೂಲಕ ಅರ್ಥಮಾಡಿಕೊಳ್ಳಬಹುದು. ಮನೆಗಳು, ಮಹಿಳೆಯರು ಮತ್ತು ಕುದುರೆಗಳ ಸ್ಥಿತಿಯೂ ಇದೇ ರೀತಿಯಾಗಿದೆ. ಇದಕ್ಕೂ ಶಿರ್ಕ್ ಆಗಿರುವ ಶುಭ–ಅಶುಭ ನೋಡುವುದಕ್ಕೂ ಯಾವುದೇ ಸಂಬಂಧವಿಲ್ಲ."

ಪತ್ನಿ, ಗುಲಾಮಸ್ತ್ರೀ, ಜಾನುವಾರು ಮುಂತಾದವುಗಳನ್ನು ಪಡೆಯುವಾಗ ಅಲ್ಲಾಹನಲ್ಲಿ ಅದರ ಒಳಿತನ್ನು, ಅದನ್ನು ಸೃಷ್ಟಿಸಲಾದ ಒಳಿತನ್ನು ಬೇಡುವಂತೆ ಮತ್ತು ಅದರ ಕೆಡುಕನಿಂದ ಮತ್ತು ಅದನ್ನು ಸೃಷ್ಟಿಸಲಾದ ಕೆಡುಕಿನಿಂದ ರಕ್ಷೆ ಬೇಡುವಂತೆ ಶರೀಅತ್ ನಿರ್ದೇಶಿಸಿದ್ದು ಇದೇ ಕಾರಣದಿಂದಾಗಿದೆ.

ಬರಕತ್ ಇಲ್ಲವೆಂಬ ಕಾರಣದಿಂದ ಮನೆ, ಪತ್ನಿ, ಜಾನುವಾರು ಮುಂತಾದವುಗಳನ್ನು ತೊರೆಯುವುದನ್ನು ಇಸ್ಲಾಮ್ ವಿರೋಧಿಸಿದೆ. ಅದೇ ರೀತಿ ಒಬ್ಬ ವ್ಯಕ್ತಿ ಒಂದು ವ್ಯಾಪಾರ ಆರಂಭಿಸಿ ಅದರಲ್ಲಿ ಲಾಭ ಸಿಗದಿದ್ದರೆ ಅದನ್ನು ತೊರೆಯಬಾರದು. ಪ್ರವಾದಿ(ﷺ) ಯವರು ಹೇಳುತ್ತಾರೆ:

«إِذَا سَبَّبَ اللَّهُ لِأَحَدِكُمْ رِزْقًا مِنْ وَجْهٍ فَلَا يَدَعْهُ حَتَّى يَتَغَيَّرَ لَهُ أَوْ يَتَنَكَّرَ لَهُ».

"ಅಲ್ಲಾಹು ನಿಮ್ಮಲ್ಲೊಬ್ಬರಿಗೆ ಒಂದು ಆದಾಯ ಮೂಲವನ್ನು ಜೀವನೋಪಾಯದ ಮಾರ್ಗವನ್ನಾಗಿ ಮಾಡಿದರೆ ಅದು ಬದಲಾಗುವ ತನಕ, ಅಥವಾ ಅದು ವಿರೂಪಗೊಳ್ಳುವ ತನಕ ಅವನು ಅದನ್ನು ಬಿಟ್ಟುಬಿಡಬಾರದು." (ಇಬ್ನ್ ಮಾಜ)

ಆದ್ದರಿಂದ ಯಾವುದಾದರೂ ಸಮಯವನ್ನು, ವ್ಯಕ್ತಿಯನ್ನು, ಮನೆಯನ್ನು ಇತ್ಯಾದಿ ಅಶುಭವೆಂದು ಭಾವಿಸುವುದು ಶಿರ್ಕ್ ಆಗಿದೆ.

ಜಾಹಿಲೀಕಾಲದ ವಿಶ್ವಾಸಗಳಲ್ಲಿ ಸೇರಿದ ಈ ಶುಭ–ಅಶುಭವು—ದುರದೃಷ್ಟವಶಾತ್—ಮುಸ್ಲಿಂ ಅವಿವೇಕಿಗಳಲ್ಲಿ ಮನೆ ಮಾಡಿರುವುದು ಅವರಲ್ಲಿರುವ ಧಾರ್ಮಿಕ ವಿದ್ಯಾಭ್ಯಾಸದ ಕೊರತೆ ಮತ್ತು ವಿಶೇಷವಾಗಿ ತೌಹೀದಿನ ಬಗ್ಗೆ ಅವರಲ್ಲಿರುವ ಅರಿವಿನ ಕೊರತೆಯಿಂದಾಗಿದೆ. ಅದರ ಕಾರಣವು ಅಜ್ಞಾನ, ತೌಹೀದಿನ ಕೊರತೆ ಮತ್ತು ಈಮಾನಿನ ದೌರ್ಬಲ್ಯವಾಗಿದೆ. ಅದು ಅವರ ಮಧ್ಯೆ ಸರಿಯಾದ ಜ್ಞಾನವು ಪಸರಿಸದ ಮತ್ತು ಅವರು ಬಿದ್‌ಅತ್ ಮತ್ತು ಪಥಭ್ರಷ್ಟತೆಯ ಜನರೊಂದಿಗೆ ಸೇರಿಕೊಂಡ ಕಾರಣದಿಂದಾಗಿದೆ.

ಅವರಿಗೆ ಮಾರ್ಗದರ್ಶನ ನೀಡುವವರ, ಅವರಿಗೆ ಸರಿದಾರಿ ತೋರಿಸುವವರ ಮತ್ತು ಏನು ವಿಶ್ವಾಸವಿಡುವುದು ಕಡ್ಡಾಯ, ಏನು ವಿಶ್ವಾಸವಿಡುವುದು ಸಮ್ಮತಾರ್ಹ, ಇಸ್ಲಾಮ್ ಧರ್ಮದಿಂದ ಹೊರಗೆ ಹೋಗುವಂತಹ ಹಿರಿಯ ಶಿರ್ಕ್ ಎಂದರೇನೆಂದು ಕಲಿಸಿಕೊಡುವವರ ಕೊರತೆಯೇ ಇದಕ್ಕೆ ಕಾರಣ.

ಕಿರಿಯ ಶಿರ್ಕ್ ಎಂದರೇನು, ಶಿರ್ಕಿನೆಡೆಗೆ ಸಾಗಿಸುವ ದಾರಿ ಎಂದರೇನು, ತೌಹೀದಿನ ಸಂಪೂರ್ಣತೆಗೆ ಅಡ್ಡಿಪಡಿಸುವ ಕಾರ್ಯಗಳು ಯಾವುವು, ಹಿರಿಯ ಶಿರ್ಕಿನೆಡೆಗೆ ಒಯ್ಯುವ

ಕಾರ್ಯಗಳು ಯಾವುವು, ಯಾವ ಶಿರ್ಕನ್ನು ಮಾಡಿ ತೌಬಾ ಮಾಡದೆ ಮರಣಹೊಂದಿದರೆ ಕರ್ಮಗಳೆಲ್ಲವೂ ನಿಷ್ಫಲವಾಗಿ ಶಾಶ್ವತ ನರಕವಾಸ ಸಿಗುತ್ತದೆ ಇತ್ಯಾದಿಗಳ ಬಗ್ಗೆ ಅವರಿಗೆ ತಿಳುವಳಿಕೆ ನೀಡುವವರ ಕೊರತೆಯೇ ಇದಕ್ಕೆ ಕಾರಣ.

ಅಲ್ಲಾಹು(ﷻ) ಹೇಳುತ್ತಾನೆ:

﴿إِنَّهُۥ مَن يُشْرِكْ بِٱللَّهِ فَقَدْ حَرَّمَ ٱللَّهُ عَلَيْهِ ٱلْجَنَّةَ وَمَأْوَىٰهُ ٱلنَّارُ ۖ وَمَا لِلظَّٰلِمِينَ مِنْ أَنصَارٍ ٧٢﴾

“ಯಾರು ಅಲ್ಲಾಹನೊಂದಿಗೆ ಇತರರನ್ನು ಸಹಭಾಗಿಗಳನ್ನಾಗಿ ಮಾಡುತ್ತಾರೋ ಅವರಿಗೆ ಅಲ್ಲಾಹು ಸ್ವರ್ಗವನ್ನು ನಿಷಿದ್ಧಗೊಳಿಸುತ್ತಾನೆ. ಅವರ ವಾಸಸ್ಥಳವು ನರಕಾಗ್ನಿಯಾಗಿದೆ. ಅನ್ಯಾಯವೆಸಗುವವರಿಗೆ ಸಹಾಯಕರಾಗಿ ಯಾರೂ ಇಲ್ಲ.” (ಕುರ್‌ಆನ್ 5:72)

ಅಲ್ಲಾಹು(ﷻ) ಹೇಳುತ್ತಾನೆ:

﴿إِنَّ ٱللَّهَ لَا يَغْفِرُ أَن يُشْرَكَ بِهِۦ وَيَغْفِرُ مَا دُونَ ذَٰلِكَ لِمَن يَشَآءُ ۚ وَمَن يُشْرِكْ بِٱللَّهِ فَقَدِ ٱفْتَرَىٰٓ إِثْمًا عَظِيمًا ٤٨﴾

“ತನ್ನೊಂದಿಗೆ ಸಹಭಾಗಿತ್ವ ಮಾಡಲಾಗುವುದನ್ನು ಅಲ್ಲಾಹು ಎಂದಿಗೂ ಕ್ಷಮಿಸುವುದಿಲ್ಲ. ಅದಲ್ಲದ ಇತರ ಪಾಪಗಳನ್ನು ಅವನಿಚ್ಛಿಸಿದವರಿಗೆ ಅವನು ಕ್ಷಮಿಸುತ್ತಾನೆ. ಅಲ್ಲಾಹನೊಂದಿಗೆ ಸಹಭಾಗಿತ್ವ ಮಾಡುವವರು ಅತಿಭಯಾನಕ ಪಾಪವನ್ನು ಮಾಡುವವರಾಗಿದ್ದಾರೆ.” (ಕುರ್‌ಆನ್ 4:48)

ಹೀಗಿದ್ದೂ ಸಹ ಅನೇಕ ಜನರು ಸಫರ್ ತಿಂಗಳು ಮತ್ತು ಅದರಲ್ಲಿ ಪ್ರಯಾಣ ಮಾಡುವುದನ್ನು ಅಶುಭವೆಂದು ಭಾವಿಸುತ್ತಾರೆ. ಅದರಲ್ಲಿ ಅವರು ಯಾವುದೇ ಶುಭ ಸಮಾರಂಭಗಳನ್ನು ಹಮ್ಮಿಕೊಳ್ಳುವುದಿಲ್ಲ. ಆದರೆ ತಿಂಗಳ ಕೊನೆ ಬಂದಾಗ ಅವರು ಕೊನೆಯ ಬುಧವಾರ ಮಹಾ ಸಮಾರಂಭವನ್ನು ಹಮ್ಮಿಕೊಳ್ಳುತ್ತಾರೆ. ಅದರಲ್ಲಿ ಅವರು ಔತಣಕೂಟ, ವಿಶೇಷ ಆಹಾರ–ಪದಾರ್ಥಗಳು ಮತ್ತು ವಿದೇಶಿ ಸಿಹಿತಿಂಡಿಗಳನ್ನು ತಯಾರಿಸುತ್ತಾರೆ. ಅದರಲ್ಲಿ ಅವರು ರೋಗ ಗುಣವಾಗಲು ಹುಲ್ಲುಗಳ ಮೇಲೆ ನಡೆಯುತ್ತಾರೆ.

ಇವೆಲ್ಲವೂ ಶಿರ್ಕಿನಲ್ಲಿ ಬೀಳಿಸುವ—ಅಲ್ಲಾಹು ಕಾಪಾಡಲಿ—ಬಿದ್‌ಅತ್‌ಗಳಲ್ಲಿ ಒಳಪಟ್ಟ ಅವಿವೇಕತನಗಳಾಗಿವೆ ಎನ್ನುವುದರಲ್ಲಿ ಯಾವುದೇ ಸಂದೇಹವಿಲ್ಲ. ಮೊದಲ ಹಂತದಲ್ಲೇ ಇದು ಅಕೀದದ ಸುರಕ್ಷತೆಗೆ ಬೆದರಿಕೆ ಒಡ್ಡುತ್ತದೆ. ಈ ಎಲ್ಲಾ ಕಾರ್ಯಗಳು ಹೊರಹೊಮ್ಮುವುದು ಶಿರ್ಕ್ ಆಗಿರುವ ತವಸ್ಸುಲ್‌ಗಳನ್ನು ಮಾಡುವುದು, ಸೃಷ್ಟಿಗಳಿಂದ ಬರಕತ್ ಆಶಿಸುವುದು ಮತ್ತು ಸೃಷ್ಟಿಗಳೊಂದಿಗೆ ಸಹಾಯಬೇಡುವುದು ಮುಂತಾದ ಶಿರ್ಕ್ ಆಗಿರುವ ಕಾರ್ಯಗಳನ್ನು ತಮ್ಮ ವಿಶ್ವಾಸದಲ್ಲಿ ಕಲಬೆರಕೆ ಮಾಡಿದವರಿಂದ ಮಾತ್ರವಾಗಿದೆ.

ಆದರೆ ಯಾರಿಗೆ ಅಲ್ಲಾಹು ಸರಿಯಾದ ಅಕೀದವನ್ನು ಅನುಗ್ರಹಿಸುತ್ತಾನೋ ಅವನು ಸದಾ ಅಲ್ಲಾಹನಲ್ಲಿ ಭರವಸೆಯಿಟ್ಟು ಅವನನ್ನು ಮಾತ್ರ ಅವಲಂಬಿಸುತ್ತಾನೆ. ತಮಗೆ ಏನು ಸಂಭವಿಸುತ್ತದೋ ಅದು ತಮ್ಮಿಂದ ದೂರವಾಗುವಂತದ್ದಲ್ಲ ಮತ್ತು ತಮಗೆ ಏನು ಸಂಭವಿಸಲಿಲ್ಲವೋ ಅದು ತಮಗೆ ಸಂಭವಿಸುವಂತದ್ದಲ್ಲ ಎಂದು ಅವರು ದೃಢವಾಗಿ ವಿಶ್ವಾಸವಿಡುತ್ತಾರೆ. ಶುಭ–ಅಶುಭಗಳಲ್ಲಿರುವ ನಂಬಿಕೆ, ಅಲ್ಲಾಹು ಅಲ್ಲದವರಿಂದ ಒಳಿತು ಮತ್ತು ಕೆಡುಕುಗಳಿಂಟಾಗುವುದು ಎಂಬ ನಂಬಿಕೆ ಮುಂತಾದವುಗಳೆಲ್ಲವೂ ಶಿರ್ಕ್ ಆಗಿವೆ. ಅವು ಅತಿಕಠೋರವಾದ ಅಕ್ರಮವಾಗಿದೆ.

ಅಲ್ಲಾಹು(ﷻ) ಹೇಳುತ್ತಾನೆ:

﴿إِنَّ ٱلشِّرْكَ لَظُلْمٌ عَظِيمٌ ١٣﴾

“ಖಂಡಿತವಾಗಿಯೂ ಶಿರ್ಕ್ ಅತಿದೊಡ್ಡ ಅಕ್ರಮವಾಗಿದೆ.” (ಕುರ್‌ಆನ್ 31:13)

ಶುಭ–ಅಶುಭಗಳಲ್ಲಿ ನಂಬಿಕೆಯಿಡುವುದು ತೌಹೀದನ್ನು ನಿಜಪಡಿಸುವುದಕ್ಕೆ ವಿರುದ್ಧವಾಗಿದೆ. ತೌಹೀದನ್ನು ನಿಜಪಡಿಸುವುದರಲ್ಲಿ ಕಡ್ಡಾಯವಾದುದು ಮತ್ತು ಪ್ರೋತ್ಸಾಹನೀಯವಾದುದು ಇದೆ.

**ಕಡ್ಡಾಯವಾದುದು ಯಾವುದೆಂದರೆ:** ಶಿರ್ಕ್, ಬಿದ್‌ಅತ್ ಮತ್ತು ಆಜ್ಞೋಲ್ಲಂಘನೆಗಳೆಂಬ ಕಲಬೆರಕೆಗಳಿಂದ ತೌಹೀದನ್ನು ಶುದ್ಧೀಕರಿಸುವುದು. ಶಿರ್ಕ್ ತೌಹೀದಿಗೆ ಸಂಪೂರ್ಣ ವಿರುದ್ಧವಾಗಿದೆ. ಬಿದ್‌ಅತ್‌ಗಳು ಅದರ ಕಡ್ಡಾಯ ಪರಿಪೂರ್ಣತೆಗೆ ವಿರುದ್ಧವಾಗಿದೆ. ಆಜ್ಞೋಲ್ಲಂಘನೆಗಳು ಅದರಲ್ಲಿ ಕೊರತೆಗಳನ್ನು ಸೃಷ್ಟಿಸಿ ಪ್ರತಿಫಲವನ್ನು ಕಮ್ಮಿ ಮಾಡುತ್ತದೆ.

ಎರಡೂ ರೀತಿಯ ಶಿರ್ಕ್‌ಗಳಿಂದ, ಬಿದ್‌ಅತ್‌ಗಳಿಂದ ಮತ್ತು ಆಜ್ಞೋಲ್ಲಂಘನೆಗಳಿಂದ ಸುರಕ್ಷಿತನಾಗುವ ತನಕ ಯಾರೂ ತೌಹೀದನ್ನು ನಿಜಪಡಿಸಿದವರಾಗುವುದಿಲ್ಲ.

**ಪ್ರೋತ್ಸಾಹನೀಯವಾದುದು ಯಾವುದೆಂದರೆ:** ಅಲ್ಲಾಹನ ಸಾಮೀಪ್ಯ ಪಡೆದವರು ತೌಹೀದನ್ನು ನಿಜಪಡಿಸಿದಂತೆ ನಿಜಪಡಿಸುವುದು. ಅಂದರೆ ಪ್ರೀತಿ, ಭಯ, ಭರವಸೆ, ಪ್ರಾರ್ಥನೆ, ನಿಷ್ಕಳಂಕತೆ, ಗೌರವ, ಭೀತಿ, ಮಹತ್ವೀಕರಣ, ಆರಾಧನೆ ಮುಂತಾದ ಸರ್ವ ವಿಷಯಗಳಲ್ಲಿಯೂ ಆತ್ಮವನ್ನು ಅಲ್ಲಾಹನ ಕಡೆಗೆ ಆಕರ್ಷಕಗೊಳಿಸುವುದು. ಇಂತಹವರ ಹೃದಯದಲ್ಲಿ ಅಲ್ಲಾಹು ಅಲ್ಲದವರಿಗೆ ಸ್ಥಾನವಿಲ್ಲ, ಅಲ್ಲಾಹು ನಿಷಿದ್ಧಗೊಳಿಸಿದ ವಿಷಯದ ಬಗ್ಗೆ ಅವರಿಗೆ ಆಸಕ್ತಿಯಿಲ್ಲ. ಅಲ್ಲಾಹು ಆಜ್ಞಾಪಿಸಿದ ವಿಷಯದ ಬಗ್ಗೆ ಅಸಹ್ಯತೆಯಿಲ್ಲ. ಇದು ಲಾಇಲಾಹ ಇಲ್ಲಲ್ಲಾಹ್ ಎಂಬ ಸಾಕ್ಷ್ಯವಚನವನ್ನು ನಿಜಪಡಿಸುವುದಾಗಿದೆ.

ಶೈಖ್ ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬ್ ತಮ್ಮ ಕಿತಾಬು ತ್ತೌಹೀದ್‌ನಲ್ಲಿ ಹೇಳುತ್ತಾರೆ:

بَـابُ: مَـنْ حَقَّـقَ التَّوْحِيـدَ دَخَـلَ الْجَنَّـةَ بِغَيْـرِ حِسَـابٍ.

“ಅಧ್ಯಾಯ: ತೌಹೀದನ್ನು ನಿಜಪಡಿಸಿದವನು ಯಾವುದೇ ವಿಚಾರಣೆಯಿಲ್ಲದೆ ಸ್ವರ್ಗವನ್ನು ಪ್ರವೇಶಿಸುವನು.”

ಅದರಲ್ಲಿ ಅವರು ಇಬ್ನ್ ಅಬ್ಬಾಸ್(ﷺ) ರವರ ಹದೀಸನ್ನು ಉಲ್ಲೇಖಿಸಿದ್ದಾರೆ.

قَالَ النَّبِيُّ صَلَّى اللَّهُ عَلَيْهِ وَسَـلَّمَ: «عُرِضَتْ عَلَيَّ الْأُمَـمُ. فَأَخَذَ النَّبِيُّ يَمُـرُّ مَعَهُ الْأُمَّـةُ. وَالنَّبِيُّ يَمُرُّ مَعَهُ النَّفَرُ. وَالنَّبِـيُّ يَمُرُّ مَعَهُ الْعَشَـرَةُ. وَالنَّبِيُّ يَمُرُّ مَعَهُ الْخَمْسَـةُ. وَالنَّبِـيُّ يَمُرُّ وَحْـدَهُ. فَنَظَرْتُ فَإِذَا سَـوَادٌ كَثِيرٌ. قُلْتُ: يَا جِبْرِيلُ! هَـؤُلَاءِ أُمَّتِي؟ قَالَ: لَا، وَلَكِـنِ انْظُرْ إِلَـى الْأُفُقِ. فَنَظَرْتُ فَإِذَا سَـوَادٌ كَثِيـرٌ. قَالَ: هَؤُلَاءِ أُمَّتُـكَ. وَهَؤُلَاءِ سَـبْعُونَ أَلْفًا قُدَّامَهُـمْ لَا حِسَـابَ عَلَيْهِمْ وَلَا عَـذَابَ. قُلْتُ: وَلِمَ؟ قَالَ: كَانُـوا لَا يَكْتَوُونَ وَلَا يَسْـتَرْقُونَ وَلَا يَتَطَيَّرُونَ. وَعَلَى رَبِّهِـمْ يَتَوَكَّلُونَ».

ಪ್ರವಾದಿ(ﷺ) ಯವರು ಹೇಳುತ್ತಾರೆ: “ನನಗೆ ಸಮುದಾಯಗಳನ್ನು ತೋರಿಸಿಕೊಡಲಾಯಿತು. ಆಗ ಒಬ್ಬ ಪ್ರವಾದಿ ಒಂದು ಸಮುದಾಯದೊಂದಿಗೆ ಚಲಿಸುತ್ತಿದ್ದರು. ಒಬ್ಬ ಪ್ರವಾದಿಯೊಂದಿಗೆ ಒಂದು ಗುಂಪು ಜನರು ಮಾತ್ರವಿದ್ದರು. ಒಬ್ಬ ಪ್ರವಾದಿಯೊಂದಿಗೆ ಕೇವಲ ಹತ್ತು ಜನರಿದ್ದರು. ಒಬ್ಬ ಪ್ರವಾದಿಯೊಂದಿಗೆ ಕೇವಲ ಐದು ಜನರಿದ್ದರು. ಒಬ್ಬ ಪ್ರವಾದಿ ಒಂಟಿಯಾಗಿ ಚಲಿಸುತ್ತಿದ್ದರು. ನಾನು ಕಣ್ಣೆತ್ತಿ ನೋಡಿದಾಗ ಕಪ್ಪಗಿನ ಒಂದು ಗುಂಪು ಕಾಣುತ್ತಿತ್ತು.

ನಾನು ಕೇಳಿದೆ—“ಓ ಜಿಬ್ರೀಲ್! ಇವರು ನನ್ನ ಸಮುದಾಯದವರಾ?”

ಅವರು ಹೇಳಿದರು—“ಅಲ್ಲ, ಆದರೆ ತಾವು ಈ ಕ್ಷಿತಿಜದ ಕಡೆಗೆ ನೋಡಿರಿ.” ನಾನು ಕಣ್ಣೆತ್ತಿ ನೋಡಿದಾಗ ಅಲ್ಲೂ ಕಪ್ಪಗಿನ ಒಂದು ಗುಂಪು ಕಾಣುತ್ತಿತ್ತು.

ಅವರು ಹೇಳಿದರು—“ಇವರು ತಮ್ಮ ಸಮುದಾಯದವರು. ಇವರ ಮುಂಭಾಗದಲ್ಲಿರುವ ಎಪ್ಪತ್ತು ಸಾವಿರ ಜನರಿಗೆ ಯಾವುದೇ ವಿಚಾರಣೆಯೋ, ಶಿಕ್ಷೆಯೋ ಇರುವುದಿಲ್ಲ.”

ನಾನು ಕೇಳಿದೆ—“ಏಕೆ?” ಅವರು ಹೇಳಿದರು—“ಅವರು ಬರೆ ಹಾಕುತ್ತಿರಲಿಲ್ಲ, ಮಂತ್ರಿಸುತ್ತಿರಲಿಲ್ಲ, ಶುಭ-ಅಶುಭಗಳಲ್ಲಿ ನಂಬಿಕೆಯಿಡುತ್ತಿರಲಿಲ್ಲ. ಅವರು ಅವರ ರಬ್ಬಿನ ಮೇಲೆ ತವಕ್ಕುಲ್ ಮಾಡುತ್ತಿದ್ದರು.” (ಅಲ್‌ಬುಖಾರಿ)

ಯಾವುದೇ ವಿಚಾರಣೆಯೋ, ಶಿಕ್ಷೆಯೋ ಇಲ್ಲದೆ ಸ್ವರ್ಗ ಪ್ರವೇಶಿಸುವವರ ವಿಶೇಷಣಗಳನ್ನು ಪ್ರವಾದಿ(ﷺ) ಯವರು ಇಲ್ಲಿ ವಿವರಿಸಿದ್ದಾರೆ. ಅಂದರೆ ಅವರು ಶುಭ-ಅಶುಭಗಳಲ್ಲಿ ನಂಬಿಕೆಯಿಡುವುದಿಲ್ಲ. ಅವರು ಅವರ ರಬ್ಬಿನ ಮೇಲೆ ತವಕ್ಕುಲ್ ಮಾಡುತ್ತಾರೆ.

ಒಟ್ಟಿನಲ್ಲಿ, ಸಫರ್ ಅಥವಾ ಇತರ ತಿಂಗಳುಗಳನ್ನು ಅಶುಭವೆಂದು ನಂಬುವುದು ಶಿರ್ಕ್ ಆಗಿರುವ ಬಿದ್‌ಅತ್ ಆಗಿದೆ. ಅದನ್ನು ತೊರೆಯುವುದು ಮತ್ತು ಅದರಿಂದ ದೂರವಾಗುವುದು ಕಡ್ಡಾಯ. ಹೆಚ್ಚು ಬಲ್ಲವನು ಅಲ್ಲಾಹು. ■

# ವಿಲಾಯತ್, ಕರಾಮತ್, ಗೈಬ್—ಒಂದು ಅಧ್ಯಯನ

ಅಲ್ಲಾಹನು ಪ್ರವಾದಿಗಳಿಗೆ ಗೈಬ್ ಆದ ಕಾರ್ಯಗಳನ್ನು ಮುಅ್‌ಜಿಝತ್ ಮೂಲಕ ತಿಳಿಸಿಕೊಡುವಾಗ ಅವರು ಯಾವತ್ತೂ ಸ್ವಂತವಾಗಿ ಗೈಬ್ ಅರಿಯುವವರಾಗುವುದಿಲ್ಲ. ಹಾಗೆಯೇ ಕರಾಮತ್‌ನ ಭಾಗವಾಗಿ ಔಲಿಯಾಗಳಿಗೆ ಇಲ್‌ಹಾಮ್, ಮುಕಾಶಫಾತ್, ತಹ್‌ದೀಸ್‌ನ ಮೂಲಕ ಯಾವುದಾದರೂ ಅದೃಶ್ಯ ಕಾರ್ಯಗಳನ್ನು ತಿಳಿಸಿಕೊಟ್ಟರೂ ಅವರು ಸ್ವಂತವಾಗಿ ಗೈಬ್ ಅರಿಯುವವರಾಗುವುದಿಲ್ಲ. ಬದಲಾಗಿ, ಅವರೆಲ್ಲರಿಗೂ ಅಲ್ಲಾಹನು ತಿಳಿಸಿಕೊಡುತ್ತಾನೆ. ಅವರಲ್ಲಿ ಯಾರೂ ಗೈಬ್ ಅರಿಯುವುದಿಲ್ಲ. ತಿಳಿಸಿಕೊಡದೆ ತಿಳಿಯುವಾಗ ಮಾತ್ರ ಗೈಬ್ ಅರಿಯುವವರು ಎಂದು ಹೇಳಬಹುದು.

ಇಂದು ಧರ್ಮದ ಹೆಸರಲ್ಲಿ ಹಲವಾರು ಶೋಷಣೆಗಳು ನಡೆಯುತ್ತಿರುವ ಕಾಲವಾಗಿದೆ. ಆಧ್ಯಾತ್ಮಿಕ ಶೋಷಣೆ ಸದಾ ಕಾಲ ಬಹಳ ಲಾಭಕರವಾದ ಒಂದು ಉದ್ಯೋಗವಾಗಿದೆ. ಇತರ ಯಾವುದೇ ಶೋಷಣೆಗಳಿಗಿಂತ ಆಧ್ಯಾತ್ಮಿಕ ಶೋಷಣೆಗೆ ಯಾವತ್ತೂ ದೊಡ್ಡ ಮಾರ್ಕೆಟ್ ಲಭಿಸಿದೆ.

ಇತ್ತೀಚೆಗೆ ನಡೆಯುತ್ತಿರುವ ಪ್ರಮುಖ ಚರ್ಚೆಗಳಲ್ಲಿ ವಿಲಾಯತ್, ಕರಾಮತ್ ಮತ್ತು ಗೈಬ್‌ಗೆ ಸಂಬಂಧಪಟ್ಟ ವಿಷಯವೂ ಒಳಪಟ್ಟಿದೆ. ಇದು ಸಾಮಾಜಿಕ ಜಾಲತಾಣಗಳಲ್ಲಿ ತುಂಬಾ ಚರ್ಚೆಗೆ ಗುರಿಯಾಗಿದೆ. ಕೆಲವು ವ್ಯಕ್ತಿಗಳು ಸ್ವಘೋಷಿತ ವಲಿಯ್ಯ್‌ಗಳಾಗಿ ಅವತಾರವೆತ್ತುತ್ತಿದ್ದಾರೆ. ತದನಂತರ ತನಗೆ ಹಲವಾರು ಕರಾಮತ್‌ಗಳಿವೆಯೆಂದು ವಾದಿಸುತ್ತಾರೆ. ಅದೃಶ್ಯಜ್ಞಾನವೂ ಅವರ ಸಾಮರ್ಥ್ಯದಿಂದ ಹೊರತಾಗಿರುವುದಿಲ್ಲ!

ಅಥವಾ ಬೇರೆ ಕೆಲವರು ನಿರ್ದಿಷ್ಟ ವ್ಯಕ್ತಿಗಳನ್ನು ವಲಿಯ್ಯ್ ಆಗಿ ಬಿಂಬಿಸಿ ಅವರಿಗೆ ಇಲ್ಲದ ಕರಾಮತ್‌ಗಳನ್ನು ಆರೋಪಿಸಿ, ಜನರ ಮಧ್ಯೆ ಅವರ ಬಗ್ಗೆ ಅಡಗೂಲಜ್ಜಿ ಕಥೆಗಳನ್ನು ಪ್ರಚುರಪಡಿಸಿ ಹುಲುಸಾದ ಬೆಳೆ ಕೊಯ್ಯುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಕೆಲವರು ಸತ್ಯವೇನು? ಯಾರನ್ನು ನಂಬಬೇಕು? ಎಂದು ಗೊತ್ತಾಗದೆ ಆಶಂಕೆಗೊಳಗಾಗುತ್ತಾರೆ.

ಬೆಟ್ಟದ ಕುಸಿತದೊಂದಿಗೆ ತಳಕುಹಾಕಲ್ಪಟ್ಟ ಒಂದು ಮೃತದೇಹ ಎಲ್ಲಿದೆಯೆಂದು ಒಬ್ಬರು ಹೇಳಿದ ಮಾತ್ರಕ್ಕೆ ಅವರಿಗೆ ಗೈಬ್ (ಅದೃಶ್ಯಜ್ಞಾನ) ಇದೆಯೋ, ಇದು ಅವರ ಕರಾಮತ್ ಆಗಿದೆಯೇ ಎಂಬ ಚರ್ಚೆಗಳು ವಾಟ್ಸಪ್, ಫೇಸ್‌ಬುಕ್‌ಗಳಲ್ಲಿ ಗಂಭೀರವಾಗಿ ನಡೆಯುತ್ತಿರುವುದಕ್ಕೆ ನಾವು ಸಾಕ್ಷಿಗಳಾಗಿದ್ದೇವೆ.

ಇಂತಹ ಪರಿಸ್ಥಿತಿಯಲ್ಲಿ ಅಹ್ಲು ಸ್ಸುನ್ನ ವಲ್ ಜಮಾಅತ್ತಿನ ನಿಲುವು ಪ್ರಕಾರ ವಿಲಾಯತ್ ಎಂದರೇನು? ವಲಿಯ್ಯ್ ಯಾರು? ಕರಾಮತ್‌ನ ನಿಜಸ್ವರೂಪವೇನೆಂದು ತಿಳಿಯುವುದು ಅಗತ್ಯ. ಅವುಗಳನ್ನು ಈ ಲೇಖನದಲ್ಲಿ ಸಂಕ್ಷಿಪ್ತವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.

ವಲಿಯ್ಯ್ ಎಂದರೆ ಅಲ್ಲಾಹನ ಸಾಮೀಪ್ಯ ಲಭಿಸಿದವರಾಗಿದ್ದಾರೆ. ವಿಶ್ವಾಸ, ಕರ್ಮ ಹಾಗೂ ಸ್ವಭಾವಗುಣಗಳಲ್ಲಿ ಅಲ್ಲಾಹನ ಆಜ್ಞೆಗಳನ್ನು ಪಾಲಿಸಿ, ಅವನ ನಿರ್ದೇಶನಗಳಿಗನುಸಾರ ಜೀವಿಸುವವನಿಗೆ ಅಲ್ಲಾಹನಿಂದ ಲಭಿಸುವ ಪ್ರತ್ಯೇಕ ಸ್ಥಾನಕ್ಕೆ ವಿಲಾಯತ್ ಎನ್ನಲಾಗುತ್ತದೆ. ಅರೇಬಿಕ್ ಕಾಲೇಜಿನಲ್ಲಿ ಕಲಿತು ಸರ್ಟಿಫಿಕೇಟ್ ಪಡೆದವನು ಅಥವಾ ವಿಶಿಷ್ಟ ವೇಷಧಾರಿಯಾಗಿ ಸಮಾಜದಿಂದ ಭಿನ್ನವಾಗಿ

ಜೀವಿಸುವವನು ವಲಿಯ್ಯ್ ಅಲ್ಲ. ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ಅನುಸರಿಸುವವನೇ ನಿಜವಾದ ವಲಿಯ್ಯ್.

ಅಲ್ಲಾಹನು ಹೇಳುತ್ತಾನೆ:



"ತಿಳಿಯಿರಿ! ನಿಶ್ಚಯವಾಗಿಯೂ ಅಲ್ಲಾಹನ ಮಿತ್ರರಾಗಿರುವವರಿಗೆ ಯಾವತ್ತೂ ಭಯ ಮತ್ತು ವ್ಯಥೆಯ ಸಂಭವವೇ ಇಲ್ಲ. ಅವರು ಸತ್ಯವಿಶ್ವಾಸವಿರಿಸಿಕೊಂಡವರು ಮತ್ತು ಧರ್ಮನಿಷ್ಠೆಯ ನಿಲುಮೆಯನ್ನಿರಿಸಿಕೊಂಡವರು." (10:62-63)

ಇದು ಅಹ್ಲುಸ್ಸುನ್ನ ವಲ್ ಜಮಾಅತ್ತಿನ ವಲಿಯ್ಯ್‌ಗೆ ಸಂಬಂಧಪಟ್ಟ ನಿಲುವಾಗಿದೆ. ಆದರೆ ಸೂಫಿಗಳು ಕೆಲವು ನಿಶ್ಚಯಿಸಲ್ಪಟ್ಟ ವ್ಯಕ್ತಿಗಳನ್ನು ವಲಿಯ್ಯ್‌ಗಳೆಂದು ಪರಿಗಣಿಸುತ್ತಾರೆ. ಇಸ್ಲಾಮಿನಲ್ಲಿ ಹಾಗೆ ನಿಶ್ಚಯಿಸಲ್ಪಟ್ಟ ವ್ಯಕ್ತಿಗಳಿಗೆ ವಿಲಾಯತ್ ಕೊಡುವ ಸಂಪ್ರದಾಯವಿಲ್ಲ. ಅದು ನೂತನವಾದಿಗಳ ಸೃಷ್ಟಿಯಾಗಿದೆ. ಈಮಾನ್ ಮತ್ತು ತಕ್ವಾವಿರುವವನೇ ವಲಿಯ್ಯ್. ಅಲ್ಲಾಹನ ಆಜ್ಞೆಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಸಿದ್ಧರಾದವರು ವಲಿಯ್ಯ್‌ಗಳಾಗಿದ್ದಾರೆ.

ಸೂಫಿಗಳು ಕೆಲವು ಮಾನದಂಡಗಳನ್ನು ನಿಶ್ಚಯಿಸಿ ಆ ಪ್ರಕಾರವಿರುವವರಿಗೆ ವಲಿಯ್ಯ್ ಪಟ್ಟ ನೀಡಿದರು. ಆದರೆ, ಇದಕ್ಕೆ ಕುರ್‌ಆನ್ ಮತ್ತು ಹದೀಸ್‌ನಲ್ಲಿ ಯಾವುದೇ ಆಧಾರವಿಲ್ಲ. ಅವರ ನಡುವೆ ವಲಿಯ್ಯ್‌ಗಳಿಗೆ ಕೆಲವು ತಸ್ದೀಕ್(ದರ್ಜೆ) ಗಳಿವೆ.

ಅವರು ಹೇಳುವ ಪ್ರಕಾರ ಲೋಕದಲ್ಲಿ ನಾಲ್ಕು ಔತಾದ್‌ಗಳಿದ್ದಾರೆ. ಅವರು ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣದಲ್ಲಿ ಲೋಕದ ವ್ಯವಹಾರವನ್ನು ನಿಭಾಯಿಸುತ್ತಿರುವವರಾಗಿರುವರು. ಹಾಗೆಯೇ ಏಳು ಅಬ್ದಾಲ್‌ಗಳಿದ್ದಾರೆ. ಅವರು ಏಳು ಆಕಾಶಗಳಲ್ಲಿ ನೆಲೆಗೊಂಡಿದ್ದಾರೆ. ಅಲ್ಲಾಹನು ಅವರ ಮುಖಾಂತರವೇ ಲೋಕದ ಎಲ್ಲಾ ಕಾರ್ಯಗಳನ್ನು ನಿಯಂತ್ರಿಸುತ್ತಿದ್ದಾನೆ. ಅಂತೆಯೇ ನಲ್ವತ್ತು ಮಂದಿ ನುಜಬಾಗಳಿದ್ದಾರೆ. ಅವರು ಸೃಷ್ಟಿಗಳ ಸಂಕಷ್ಟ, ಭಾರಗಳನ್ನು ಹೊತ್ತುಕೊಳ್ಳುವವರಾಗಿದ್ದಾರೆ. ಆ ಬಳಿಕದ 300 ನುಖಬಾಗಳು ಜನರ ಆಂತರಿಕ ಕಾರ್ಯಗಳನ್ನು ನೋಡಿಕೊಳ್ಳುತ್ತಾರೆ. ತದನಂತರ ಓರ್ವ ಖುತುಬ್ (ಅಲ್ ಗೌಸುಲ್ ಅಅ್‌ಳಂ) ಬರುತ್ತಾರೆ. ಇದು ಅವರು ವಲಿಯ್ಯ್‌ಗಳನ್ನು ವಿಂಗಡಿಸುವ ಕ್ರಮವಾಗಿದೆ.

ಸೂಫಿಗಳು ವಲಿಯ್ಯ್‌ಗಳಿಗೆ ಪ್ರವಾದಿಗಳಿಗಿಂತ ದೊಡ್ಡ ಸ್ಥಾನಮಾನವನ್ನು ನೀಡುತ್ತಾರೆ. ಅವರ ವಾದ ಪ್ರಕಾರ ವಿಲಾಯತ್ ನುಬುವ್ವತ್‌ಗಿಂತಲೂ ಶ್ರೇಷ್ಠ ಪದವಿಯಾಗಿದೆ. ಪ್ರವಾದಿ(ﷺ) ಯವರಿಗೆ ನುಬುವ್ವತ್ ಮತ್ತು ವಿಲಾಯತ್ ಇದೆ. ಪ್ರವಾದಿ(ﷺ) ಯವರ ಶ್ರೇಷ್ಠತೆಗೆ ನುಬುವ್ವತ್ ಕಾರಣವಾಗಿರದೆ ವಿಲಾಯತ್ ಕಾರಣವಾಗಿದೆ ಎನ್ನುವುದು ಅವರ ವಾದವಾಗಿದೆ. ಅವರ ವಾದ ಪ್ರಕಾರ ಅವರ ವಲಿಯ್ಯ್‌ಗಳಿಂದ ತಪ್ಪು ಸಂಭವಿಸುವುದಿಲ್ಲ. ಆದುದರಿಂದ ವಲಿಯ್ಯ್ ಏನನ್ನಾದರೂ ಹೇಳಿದರೆ ಅದನ್ನು ಅನುಸರಿಸುವುದು ಕಡ್ಡಾಯವಾಗಿದೆ. ವಲಿಯ್ಯ್‌ಗಳು ಪಾಪಗಳಿಂದ ಸಂರಕ್ಷಿಸಲ್ಪಟ್ಟವರಾಗಿದ್ದಾರೆ. ಇವೆಲ್ಲವೂ ವಲಿಯ್ಯ್‌ಗಳ ಬಗ್ಗೆ ಸೂಫಿಗಳಿಗಿರುವ ವಿಶ್ವಾಸವಾಗಿದೆ.

ಇಮಾಮ್ ತಹಾವಿಯ್ಯ(ರ) ಹೇಳುತ್ತಾರೆ:

"ನಾವು ಯಾವ ವಲಿಯ್ಯಿಗೂ ಪ್ರವಾದಿ(ﷺ) ಯವರಿಗಿಂತ ಹೆಚ್ಚಿನ ಶ್ರೇಷ್ಠತೆಯನ್ನು ಕಲ್ಪಿಸುವುದಿಲ್ಲ. ಬದಲಾಗಿ ನಾವು ಹೀಗೆನ್ನುತ್ತೇವೆ. ಓರ್ವ ಪ್ರವಾದಿ ಎಲ್ಲಾ ವಲಿಯ್ಯ್‌ಗಳಿಗಿಂತ ಶ್ರೇಷ್ಠರಾಗಿದ್ದಾರೆ."

ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯ(ರ) ಹೇಳುತ್ತಾರೆ:

"ಸತ್ಯವಿಶ್ವಾಸಿಗಳಾದ ಎಲ್ಲರೂ ಅಲ್ಲಾಹನ ವಲಿಯ್ಯ್‌ಗಳಾಗಿದ್ದಾರೆ."

ವಿಶ್ವಾಸ, ಕರ್ಮ, ಸ್ವಭಾವರಂಗಗಳಲ್ಲಿ ಅಲ್ಲಾಹನ ಆದೇಶಗಳ ಪ್ರಕಾರ ಜೀವಿಸುವವರೆಲ್ಲ 'ಮುಅ್‌ಮಿನ್' ಅಥವಾ ಸತ್ಯವಿಶ್ವಾಸಿಗಳಾಗಿದ್ದಾರೆ.

ಒಬ್ಬರು ವಲಿಯ್ಯ್ ಆಗುವಾಗ ಅವರಿಗೆ ಅಲ್ಲಾಹನ ವತಿಯಿಂದ ಲಭಿಸುವ ಗೌರವಕ್ಕೆ ಕರಾಮತ್ ಎನ್ನಲಾಗುತ್ತದೆ. ಮತ್ತೊಂದು ವಿಧದಲ್ಲಿ ಹೇಳುವುದಾದರೆ ಅಲ್ಲಾಹನ ಆಜ್ಞಾನುಸಾರ ಜೀವಿಸುವ ಉತ್ತಮ ವ್ಯಕ್ತಿಗಳ ಮೂಲಕ ಅಲ್ಲಾಹನು ಜಾರಿಗೊಳಿಸುವ ಅತಿಮಾನುಷಿಕ ಸಂಭವವೇ ಕರಾಮತ್. ಹೀಗಿರುವಾಗ ಕರಾಮತ್ ಉಂಟಾಗುವ ಅರ್ಹತೆ ಬರುವುದು ವಲಿಯ್ಯ್ ಆಗುವಾಗ ಮಾತ್ರವಾಗಿದೆ. ವಲಿಯ್ಯ್ ವಿಶ್ವಾಸ, ಕರ್ಮ, ಸ್ವಭಾವರಂಗಗಳಲ್ಲಿ ಅಲ್ಲಾಹನ ವಿಧಿ-ನಿಷೇಧಗಳನ್ನು ಪಾಲಿಸಿ ಜೀವಿಸುವವನಾಗಿದ್ದಾನೆ.

ಅಲ್ಲಾಹನು ಅವನ ದಾಸರಲ್ಲಿ ಎರಡು ವಿಧದಲ್ಲಿ ಕರಾಮತ್ ಜಾರಿಗೊಳಿಸುತ್ತಾನೆ.

1. ಅವನ ವಿಶ್ವಾಸವನ್ನು ಬಲಪಡಿಸಲು.

2. ಅವನು ಅಳವಡಿಸಿಕೊಂಡಿರುವುದು ಸತ್ಯವಾಗಿದೆಯೆಂದು ಮನವರಿಕೆ ಮಾಡಿಕೊಡಲು.

ಕರಾಮತ್ ಕುರಿತು ಕಲಿಯುವಾಗ ಮೂರು ವಿಧದ ಜನರು ನಮಗೆ ಕಂಡುಬರುತ್ತಾರೆ.

1. **ಮುಅ್‌ತಸಲಿಗಳು:** ಇವರು ಕರಾಮತ್ ಅಂಗೀಕರಿಸುವುದಿಲ್ಲ. ಪ್ರವಾದಿಗಳಿಗೆ ಮುಅ್‌ಜಿಝತ್ ಇದೆ ಎಂದಲ್ಲದೆ ಬೇರೆ ಯಾವುದನ್ನೂ ಅವರು ಒಪ್ಪಿಕೊಳ್ಳುವುದಿಲ್ಲ. ಇವರು ಪಥಭ್ರಷ್ಟ ವಿಭಾಗದವರಾಗಿದ್ದಾರೆ.

2. **ಸೂಫಿಗಳು:** ಇವರು ಕರಾಮತ್ತನ್ನು ಪರಿಧಿಯಿಲ್ಲದ ರೀತಿಯಲ್ಲಿ ಅಂಗೀಕರಿಸುವವರಾಗಿದ್ದಾರೆ. ಕೆಲವು ಪ್ರತ್ಯೇಕ ಜನರಿಗೆ ವಿಲಾಯತ್ ನಿಶ್ಚಯಿಸಿ ಅವರಿಗೆ ಇಲ್ಲದ ಸ್ಥಾನ-ಮಾನಗಳನ್ನು ನೀಡುತ್ತಾರೆ.

3. **ಅಹ್ಲು ಸ್ಸುನ್ನ ವಲ್ ಜಮಾಅ (ಸಲಫಿಗಳು):** ಸಲಫಿಗಳು ಕರಾಮತ್ ಅಂಗೀಕರಿಸುವವರಾಗಿದ್ದಾರೆ.

ಇಮಾಂ ತಹಾವಿಯ್ಯ ಹೇಳುತ್ತಾರೆ: ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯರವರು ಸರಿಯಾದ ವರದಿ ಪ್ರಕಾರ ಅವರಿಂದ ಉಲ್ಲೇಖಿಸಲ್ಪಟ್ಟ ಕರಾಮತ್‌ಗಳನ್ನು ನಾವು ಅಂಗೀಕರಿಸುತ್ತೇವೆ ಮತ್ತು ಅದು ಅಂತ್ಯದಿನದ ತನಕ ಮುಂದುವರಿಯುವುದು ಎಂದು ಹೇಳಿದ್ದಾರೆ. ಕುರ್‌ಆನಿನಲ್ಲಿ ಪ್ರಸ್ತಾಪಿಸಲ್ಪಟ್ಟ ಮರ್ಯಮ್ ಮತ್ತು ಖಿಳ್ರ್‌ರವರ ಸಂಭವಗಳು ಕರಾಮತ್‌ಗಳಿಗೆ ಉದಾಹರಣೆಗಳಾಗಿವೆ.

ಆದರೆ ಸಲಫಿಗಳು, ಕರಾಮತ್‌ಗಳು ಕೆಲವು ನಿಬಂಧನೆಗಳಿಗೆ ಒಳಪಟ್ಟಿದೆ ಎಂದು ಹೇಳುತ್ತಾರೆ.

1. ವಿಶ್ವಾಸ, ಕರ್ಮ, ಸ್ವಭಾವರಂಗಗಳಲ್ಲಿ ಅಲ್ಲಾಹನ ವಿಧಿ–ನಿಷೇಧಗಳನ್ನು ಪಾಲಿಸುವವರು ಮಾತ್ರ ವಲಿಯ್ಯ್‌ಗಳು.

2. ವಲಿಯ್ಯ್ ಯಾವತ್ತೂ ಕರಾಮತ್‌ನ ಮೂಲಕ ಮುಅ್‌ಜಿಝತ್‌ನ ಪದವಿಗೆ ತಲುಪುವುದಿಲ್ಲ.

3. ಕರಾಮತ್ ಉಂಟಾಗುವುದು ವಿಲಾಯತ್‌ನ ನಿಬಂಧನೆ (ಶರತ್ತು) ಯೇನಲ್ಲ. ವಲಿಯ್ಯ್ ಆದ ಎಲ್ಲಾ ವ್ಯಕ್ತಿಗಳಿಗೆ ಕರಾಮತ್ ಉಂಟಾಗಬೇಕೆಂದಿಲ್ಲ.

4. ಕೆಲವೊಮ್ಮೆ ವಿದ್ವಾಂಸರಿಗಿಂತಲೂ ಮಿಗಿಲಾಗಿ ಜನಸಾಮಾನ್ಯರಲ್ಲಿ ಕರಾಮತ್ ಪ್ರಕಟವಾಗಬಹುದು.

ಈ ಕಾರಣದಿಂದ ಕರಾಮತ್ ಲಭಿಸಿದ ವ್ಯಕ್ತಿ ವಿದ್ವಾಂಸರಿಗಿಂತಲೂ ದೊಡ್ಡ ಸ್ಥಾನವನ್ನು ಪಡೆದವನಾಗುವುದಿಲ್ಲ. ಅಲ್ಲಾಹನು ಜನಸಾಮಾನ್ಯರಿಗಿಂತಲೂ ವಿದ್ವಾಂಸರಿಗೆ ಹೆಚ್ಚಿನ ಪದವಿಯನ್ನು ನೀಡಿದ್ದಾನೆ. ಈ ವಿಷಯದಲ್ಲಿ ಜನರಲ್ಲಿ ತಪ್ಪುಕಲ್ಪನೆಯಿದೆ.

ಕೆಲವು ವಿದ್ವಾಂಸರು ಅಸಾಧಾರಣ ಸಂಭವಗಳನ್ನು ಏಳು ಭಾಗವಾಗಿ ವಿಂಗಡಿಸಿದ್ದಾರೆ.

1. ಅಲ್‌ಇರ್‌ಹಾಸ್ವಾತ್ : ಅಲ್ಲಾಹನು ಲೋಕದಲ್ಲಿ ಪ್ರವಾದಿಗಳನ್ನು ನಿಯೋಗಿಸುವುದಕ್ಕಿಂತ ಮೊದಲು ಲೋಕದಲ್ಲಿ ಜಾರಿಗೊಳಿಸಿದ ಕೆಲವು ಅದ್ಭುತ ಪ್ರತಿಭಾಸಗಳು.

2. ಮುಅ್‌ಜಿಝತ್: ಪ್ರವಾದಿಗಳಲ್ಲಿ ಮಾತ್ರ ಉಂಟಾಗುವ ಅತಿಮಾನುಷಿಕ ಸಂಭವಗಳು.

3. ಕರಾಮತ್: ಅಲ್ಲಾಹನ ವಲಿಯ್ಯ್‌ಗಳಲ್ಲಿ ಉಂಟಾಗುವ ಅಸಾಧಾರಣ ಸಂಭವಗಳು.

4. ಅಲ್‌ಔನ್ : ಅಲ್ಲಾಹನ ವತಿಯಿಂದ ಬಂದೊದಗುವ ಸಹಾಯ. ಅದು ಮುಸ್ಲಿಮರಾದ ಯಾರಲ್ಲೂ ಉಂಟಾಗಬಹುದು.

ಇವು ನಾಲ್ಕು ಕೂಡಾ ಒಳಿತಾಗಿದೆ.

5. ಸಿಹ್ರ್

6. ತನ್ಜೀಮ್ : ನಕ್ಷತ್ರ ಮತ್ತು ಅದರ ಸಂಚಾರ ಪಥ ವ್ಯವಸ್ಥೆ ಮುಂತಾದವುಗಳನ್ನು ಕಲಿತು ಭವಿಷ್ಯ ನುಡಿಯುವ ಒಂದು ಶಾಸ್ತ್ರ. ಅದರ ಮೂಲಕ ಮನುಷ್ಯರಲ್ಲಿ ನಡೆಯುವ ಕಾರ್ಯಗಳನ್ನು ತಿಳಿಯಬಹುದೆನ್ನುವುದು ಅವರ ವಿಶ್ವಾಸವಾಗಿದೆ.

7. ಜ್ಯೋತಿಷ್ಯ.

ಇವು ಮೂರೂ ಶರ್ರ್ ಅಥವಾ ಕೆಡುಕಾಗಿದೆ. ಕೆಡುಕು ಶೈತಾನನ ಭಾಗದಿಂದ ಉಂಟಾಗುವಂತದ್ದಾಗಿದೆ.

ಅಶ್‌ಅರಿಗಳು ತಮ್ಮ ಪಥಭ್ರಷ್ಟತೆಯ ವಾದಗಳಾಗಿ ಅಹ್ಲುಸ್ಸುನ್ನ ವಲ್

ಜಮಾಅತ್ತಿನಿಂದ ವ್ಯತಿಚಲಿಸಿದವರಾಗಿದ್ದಾರೆ. ಅವರು ಕರಾಮತ್ ಮತ್ತು ಮುಅ್‌ಜಿಝತ್ತನ್ನು ಬೇರ್ಪಡಿಸುವುದಿಲ್ಲ. ಅವರ ಪ್ರಕಾರ ಅಸಾಧಾರಣ ಸಂಭವಗಳೆಲ್ಲವೂ ಸಮಾನವಾಗಿದೆ. ಆ ವಾದವು ಸರಿಯಲ್ಲ. ಕೆಲವು ಕಾರಣಗಳಿಂದ ಅವುಗಳನ್ನು ಬೇರ್ಪಡಿಸುವುದು ಅನಿವಾರ್ಯವಾಗಿದೆ.

1. ನುಬುವ್ವತ್‌ನ ವಾದವನ್ನು ಸತ್ಯವೆಂದು ತಿಳಿಸುವ ಅಸಾಧಾರಣ ಸಂಭವಗಳಿಗೆ ಮುಅ್‌ಜಿಝತ್ ಎನ್ನಲಾಗುತ್ತದೆ. ಆದರೆ ಔಲಿಯಾಗಳಲ್ಲಿ ಪ್ರಕಟವಾಗುವುದು ಕರಾಮತ್ ಆಗಿದೆ.

2. ಮುಅ್‌ಜಿಝತ್ ಬಹಿರಂಗಪಡಿಸಲು ಇರುವಂತದ್ದಾಗಿದೆ. ಕರಾಮತ್ ಮರೆಮಾಚಿಡುವಂತದ್ದಾಗಿದೆ. ಬಹಿರಂಗಪಡಿಸಿದರೆ ಕೆಲವೊಮ್ಮೆ ಪ್ರಸಿದ್ಧಿಯ ಗೀಳು ಅಂಟಿಕೊಳ್ಳಬಹುದು.

3. ಪ್ರವಾದಿಗಳು ಕುಫ್ರ್ (ಸತ್ಯನಿಷೇಧ) ನಿಫಾಖ್ (ಕಾಪಟ್ಯ) ಹಾಗೂ ಪಾಪಗಳಿಂದ ಸುರಕ್ಷಿತರಾಗಿದ್ದಾರೆ. ಆದರೆ ವಲಿಯ್ಯ್ ಈ ಮೂರರಿಂದಲೂ ನಿರ್ಭೀತರಲ್ಲ. ವಲಿಯ್ಯ್‌ನಿಂದ ತಪ್ಪುಗಳು ಸಂಭವಿಸಬಹುದು. ಅವನಿಂದ ಹರಾಮ್ ಉಂಟಾಗಬಹುದು.

4. ಕರಾಮತ್ ಪ್ರಕಟವಾಯಿತು ಎಂದ ಮಾತ್ರಕ್ಕೆ ಒಬ್ಬ ವ್ಯಕ್ತಿ ಸಮುದಾಯದಲ್ಲಿ ಪ್ರವಾದಿಯೋ ಖಲೀಫರೋ ಆಗಿರದಿದ್ದರೆ ಅವನು ಅನುಸರಿಸಲ್ಪಡುವವನಾಗುವುದಿಲ್ಲ. ಬಿದ್‌ಅತ್‌ನವರಾದ ಸೂಫಿಗಳು ಆ ನಿಲುವು ಸ್ವೀಕರಿಸಿದವರಾಗಿದ್ದಾರೆ.

5. ಒಬ್ಬನಲ್ಲಿ ನುಬುವ್ವತ್ ಮತ್ತು ರಿಸಾಲತ್ ಉಂಟಾದರೆ ನಂತರ ಅದನ್ನು ಅವರು ಕಳೆದುಕೊಳ್ಳುವುದಿಲ್ಲ. ಆದರೆ ವಿಲಾಯತ್‌ನ ಸ್ಥಿತಿ ಹೀಗಿಲ್ಲ. ಅದು ಅವನಿಂದ ಕಿತ್ತುಕೊಳ್ಳಲ್ಪಡಬಹುದು.

ಸೂಫಿಗಳಲ್ಲಿ ಕರಾಮತ್‌ನ ಹೆಸರು ಹೇಳಿಕೊಂಡು ಗೈಬ್ ವಾದಿಸುವ ಹಲವು ಜನರಿದ್ದಾರೆ. ಗೈಬ್ ತಿಳಿದವನು ಅಲ್ಲಾಹು ಮಾತ್ರ. ಅಲ್ಲಾಹೇತರರಾದ ಯಾವ ವ್ಯಕ್ತಿಗೂ ಅಲ್ಲಾಹನು ತಿಳಿಸಿಕೊಡದೆ ಗೈಬ್ ಅರಿಯುವುದಿಲ್ಲ.

ಆದರೆ ಸೂಫಿಗಳು ಔಲಿಯಾಗಳು ಗೈಬ್ ಅರಿಯುವವರೆಂದು ವಾದಿಸುವವರಾಗಿದ್ದಾರೆ. ಅಲ್ಲಾಹನು ಗೈಬ್ ಆದ ಕಾರ್ಯಗಳನ್ನು ಪ್ರವಾದಿಗಳಿಗೆ ಮಾತ್ರ ತಿಳಿಸಿಕೊಡುತ್ತಾನೆ.

ಅಲ್ಲಾಹನು ಹೇಳುತ್ತಾನೆ:

عَٰلِمُ ٱلْغَيْبِ فَلَا يُظْهِرُ عَلَىٰ غَيْبِهِۦٓ أَحَدًا
﴿٢٦﴾ إِلَّا مَنِ ٱرْتَضَىٰ مِن رَّسُولٍ فَإِنَّهُۥ يَسْلُكُ
مِنۢ بَيْنِ يَدَيْهِ وَمِنْ خَلْفِهِۦ رَصَدًا ﴿٢٧﴾

“ಅವನು ಅದೃಶ್ಯಜ್ಞಾನಿಯಾಗಿದ್ದಾನೆ. ತನ್ನ ಅದೃಶ್ಯಜ್ಞಾನವನ್ನು ಅವನು ಯಾರಿಗೂ ತಿಳಿಯಪಡಿಸುವುದಿಲ್ಲ. (ಅದೃಶ್ಯಜ್ಞಾನವನ್ನು ನೀಡಲಿಕ್ಕಾಗಿ) ತಾನು ಮೆಚ್ಚಿಕೊಂಡ ತನ್ನ ಸಂದೇಶವಾಹಕರ ಹೊರತು. ಆಗ ಅವರ (ಸಂದೇಶವಾಹಕರ) ಮುಂದೆಯೂ ಹಿಂದೆಯೂ ಕಾವಲುಗಾರರನ್ನು ನೇಮಿಸಿಬಿಡುತ್ತಾನೆ.” (72:26-27)

ಔಲಿಯಾಗಳಿಗೆ ಲಭಿಸುವುದು ಇಲ್‌ಹಾಮ್ ಆಗಿದೆ. ಅಥವಾ ಮುಕಾಶಫಾತ್ ಹಾಗೂ ತಹ್‌ದೀಸ್‌ನ ಮೂಲಕವಾಗಿದೆ. ಅಲ್ಲಾಹನು ಕೆಲವೊಮ್ಮೆ ಅದೃಶ್ಯವಾದ ಕೆಲವು ಕಾರ್ಯಗಳನ್ನು ಅವನ ದಾಸರಾದ ಕೆಲವರಿಗೆ ತಿಳಿಸಿಕೊಡುತ್ತಾನೆ. ಅದು ಎರಡು ವಿಧದಲ್ಲಿದೆ.

1. ಅಲ್ಲಾಹನ ಪ್ರವಾದಿಗಳಿಗೆ: ಅವರಿಗೆ ವಹ್ಯ್ ಮೂಲಕ ಅಲ್ಲಾಹನು ಅದೃಶ್ಯ ತಿಳಿಸಿಕೊಡುತ್ತಾರೆ.

2. ಔಲಿಯಾಗಳಿಗೆ ಅಲ್ಲಾಹನು ಇಲ್‌ಹಾಮ್, ಮುಕಾಶಫಾತ್, ತಹ್‌ದೀಸ್‌ನ ಮೂಲಕ ತಿಳಿಸಿಕೊಡುತ್ತಾನೆ.

ಅದು ಔಲಿಯಾಗಳಿಗಿರುವ ಕರಾಮತ್‌ನ ಭಾಗವಾಗಿದೆ. ಅನ್ಯಥಾ ಗೈಬ್ ಅರಿಯುವುದಲ್ಲ.

ಅಲ್ಲಾಹನು ಪ್ರವಾದಿಗಳಿಗೆ ಗೈಬ್ ಆದ ಕಾರ್ಯಗಳನ್ನು ಮುಅ್‌ಜಿಝತ್ ಮೂಲಕ ತಿಳಿಸಿಕೊಡುವಾಗ ಅವರು ಯಾವತ್ತೂ ಸ್ವಂತವಾಗಿ ಗೈಬ್ ಅರಿಯುವವರಾಗುವುದಿಲ್ಲ. ಹಾಗೆಯೇ ಕರಾಮತ್‌ನ ಭಾಗವಾಗಿ ಔಲಿಯಾಗಳಿಗೆ ಇಲ್‌ಹಾಮ್, ಮುಕಾಶಫಾತ್, ತಹ್‌ದೀಸ್‌ನ ಮೂಲಕ ಯಾವುದಾದರೂ ಅದೃಶ್ಯ ಕಾರ್ಯಗಳನ್ನು ತಿಳಿಸಿಕೊಟ್ಟರೂ ಅವರು ಸ್ವಂತವಾಗಿ ಗೈಬ್ ಅರಿಯುವವರಾಗುವುದಿಲ್ಲ. ಬದಲಾಗಿ, ಅವರೆಲ್ಲರಿಗೂ ಅಲ್ಲಾಹನು ತಿಳಿಸಿಕೊಡುತ್ತಾನೆ. ಅವರಲ್ಲಿ ಯಾರೂ ಗೈಬ್ ಅರಿಯುವುದಿಲ್ಲ. ತಿಳಿಸಿಕೊಡದೆ ತಿಳಿಯುವಾಗ ಮಾತ್ರ ಗೈಬ್ ಅರಿಯುವವರು ಎಂದು ಹೇಳಬಹುದು.

ಯತಾರ್ಥ ಗೈಬ್ ಮತ್ತು ಸಾಪೇಕ್ಷ ಗೈಬ್‌ಗಳಿವೆ. ಸಮೀಪದ

*31 ನೇ ಪುಟಕ್ಕೆ*

# ಪತ್ನಿಯ ಹೃದಯವನ್ನು ಗೆಲ್ಲುವುದು ಹೇಗೆ?

ನೀವು ನಿಮ್ಮೊಳಗೆ ಇದಕ್ಕೆ ಕಾರಣವನ್ನು ಅನ್ವೇಷಿಸಿದರೆ ಖಂಡಿತ ಅದು ನಿಮಗೆ ಲಭಿಸುತ್ತದೆ. ಅದೇ ಪ್ರಕಾರ ಪ್ರವಾದಿ (ﷺ) ಯವರು ಓರ್ವ ಪತಿಯಾಗಿ ನಿರ್ವಹಿಸಿದ ಪಾತ್ರವನ್ನು ಅವಲೋಕನ ಮಾಡಿದರೂ ಸಮಸ್ಯೆಗೆ ಪರಿಹಾರ ಲಭಿಸುತ್ತದೆ. ವಿವಾಹಕ್ಕಿಂತ ಮೊದಲು ಸರಿಯಾಗಿ ಪರಿಶೀಲಿಸಿಕೊಂಡು ನೆಂಟಸ್ತಿಕೆ ಬೆಳೆಸಬೇಕು. ಆ ಕುರಿತು ಕುಟುಂಬದ ಹಿರಿಯರೊಂದಿಗೆ ವಿಚಾರ ವಿಮರ್ಶೆ ನಡೆಸಬೇಕು. ಅವರಿಗೆ ಸರಿ ಯಾವುದು? ತಪ್ಪು ಯಾವುದು? ಎಂಬ ಬಗ್ಗೆ ಹೆಚ್ಚಿನ ಅನುಭವ ಇರುತ್ತದೆ.

ಚಿಂತಕರೋರ್ವರು ಹೇಳುವಂತೆ "ಸ್ತ್ರೀ ಎಂದರೆ ಎಷ್ಟೊಂದು ಮಹತ್ವದ ವಸ್ತುವೆಂದರೆ ಅದರ ಹೊರತು ಪುರುಷರು ಜೀವಿಸುವುದೇ ಕಷ್ಟ. ಇನ್ನು ಸ್ತ್ರೀಯನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳುವುದೆಂದರೆ ಅವನ ಮಟ್ಟಿಗೆ ಕಷ್ಟವೋ ಕಷ್ಟ."

ಪ್ರತಿಯೊಬ್ಬ ಪುರುಷನೂ ಅವನ ಪತ್ನಿಯ ಹೃದಯವನ್ನು ಗೆದ್ದು ಅದರಲ್ಲಿ ಏಕಮೇವಾದ್ವಿತೀಯನಾಗಿ ಮೆರೆಯಬೇಕೆಂಬ ಅಭಿಲಾಷೆ ಇಟ್ಟುಕೊಂಡಿರುತ್ತಾನೆ. ನಾನು ಅವಳ ಹೃದಯಬಡಿತವಾಗಿ ಅವಳೊಂದಿಗೆ ಕಲೆತಿರಬೇಕು. ಅವಳು ಧಾರಾಳವಾಗಿ ನನ್ನನ್ನು ಪ್ರೀತಿಸುವಂತಾಗಬೇಕು. ಅತ್ಯಂತ ಹೆಚ್ಚು ಗೌರವಿಸಬೇಕು ಎಂಬಂತಹ ಕಲ್ಪನೆಗಳನ್ನು ಮದುವೆಗೆ ಮೊದಲು ಸಾಧಾರಣವಾಗಿ ಎಲ್ಲಾ ಪುರುಷರೂ ಇಟ್ಟುಕೊಂಡಿರುತ್ತಾರೆ.

ಆದರೆ ಮದುವೆಯ ನಂತರ ಸಾಧಾರಣವಾಗಿ ಕೆಲವೇ ದಿನಗಳಲ್ಲಿ ಈ ಕನಸು ನುಚ್ಚುನೂರಾಗುತ್ತದೆ. ಆಶಾ ಗೋಪುರ ಕುಸಿದು ಬೀಳುತ್ತದೆ. ನೀವು ಓರ್ವ ಪುರುಷನಾಗಿದ್ದರೆ ಒಂದೋ ವಿವಾಹಿತರಾಗಿರುತ್ತೀರಿ ಅಥವಾ ವಿವಾಹದ ಸುಂದರ ಕಾಲ್ಪನಿಕ ಮಹಲಿನಲ್ಲಿ ಪ್ರವೇಶಿಸುವ ಅಭಿಲಾಷೆ ಇಟ್ಟುಕೊಂಡಿರುತ್ತೀರಿ. ನೀವು ವಿವಾಹಿತರಾಗಿದ್ದರೂ ಅಲ್ಲದಿದ್ದರೂ ಈ ಕಿರು ಲೇಖನ ನಿಮಗೆ ಸಹಕಾರಿಯಾಗುವುದು ಖಂಡಿತ.

ಕೆಲವೊಮ್ಮೆ ಪತಿ ಮಹಾಶಯನು ಮಾನಸಿಕ ಸಮಸ್ಯೆ ಅಥವಾ ಸಂಘರ್ಷಕ್ಕೆ ಒಳಗಾಗಿದ್ದು ಅದರ ಪರಿಣಾಮ ಅವನ ಮನಸ್ಸು, ಅವನ ಬುದ್ಧಿ, ಅವನ ಮಾತು ಮತ್ತು ಕೃತಿಯಲ್ಲಿ ಪ್ರತಿಫಲಿಸುತ್ತದೆ. ಆದರೆ ಆ ಮಹಾಶಯ ತನ್ನೊಳಗಿನ ಸಮಸ್ಯೆಯನ್ನು ಗಮನಿಸುವುದೇ ಇಲ್ಲ. ಮಾತ್ರವಲ್ಲ ತನ್ನನ್ನು ಸಂಪೂರ್ಣ ಸ್ವಸ್ಥನೆಂದೂ, ಸಮರ್ಥನೆಂದೂ ಭಾವಿಸಿಕೊಂಡಿರುತ್ತಾನೆ. ಆದರೆ ಇವನ ಈ ರೋಗದ ಕಾರಣದಿಂದ ಮನೆಯಲ್ಲಿ ಅತೃಪ್ತಿ ಮತ್ತು ಅಶಾಂತಿಯ ಬೀಜಾಂಕುರಾಗುತ್ತದೆ. ಸಂತೋಷ ಮತ್ತು ನೆಮ್ಮದಿಗೆ ಗ್ರಹಣ ಹಿಡಿಯುತ್ತದೆ. ಕುಟಂಬದಲ್ಲೆಲ್ಲಾ ಇದೊಂದು ವ್ಯಥೆಯ, ಚಿಂತೆಯ ವಿಷಯವಾಗಿ ಎಲ್ಲರ ಮಾನಸಿಕ ತುಮುಳಕ್ಕೆ ಕಾರಣವಾಗುತ್ತದೆ. ಇಂತಹ ಪತಿ ಮಹಾಶಯ ಸ್ವಯಂ ತನ್ನ ನೆಮ್ಮದಿಯನ್ನು ಕೆಡಿಸಿಕೊಳ್ಳುವುದು ಮಾತ್ರವಲ್ಲದೆ ಸಂಪೂರ್ಣ ಕೌಟುಂಬಿಕ ಬಿಕ್ಕಟ್ಟಿಗೂ ಕಾರಣನಾಗುತ್ತಾನೆ.

ವಿಚಿತ್ರವಾದ ವಿಷಯವೇನೆಂದರೆ ಇವನು ಸರಿ–ತಪ್ಪುಗಳೆಲ್ಲಾ ಪತ್ನಿಯದ್ದೆಂದು ಭಾವಿಸಿಕೊಂಡಿರುತ್ತಾನೆ. ಮನೆಯಲ್ಲಿ ಉಂಟಾದ ಸರ್ವ ಸಮಸ್ಯೆ, ಸಂಕಷ್ಟ, ಅಶಾಂತಿ ಮತ್ತು ಗೊಂದಲಕ್ಕೆ ಏಕೈಕ ಕಾರಣ ಅವನ ಪತ್ನಿ ಎಂದು ತಿಳಿಯುತ್ತಾನೆ. ಆ ಅಬಲೆಯ ಹಿಂದೆ ಅವನು ಬೇಟೆ ನಾಯಿಯಂತೆ ಬಿದ್ದುಬಿಡುತ್ತಾನೆ. ಒಮ್ಮೆ ಮುಫ್ತಿಗಳ ಬಳಿಗೂ ಇನ್ನೊಮ್ಮೆ ಊರಿನ ಮುಖ್ಯರ ಬಳಿಗೂ ತಲಾಖ್ ತಲಾಖ್ ಎಂದು

ಜಪಿಸುತ್ತಾ ಪ್ರದಕ್ಷಿಣೆ ಬರತೊಡಗುತ್ತಾನೆ. ತನ್ನ ಹಣೆಬರಹವನ್ನು ಹಳಿಯುತ್ತಾ ಪತ್ನಿಯನ್ನು ಪರರ ಮುಂದೆ ದೂಷಿಸುತ್ತಾ ತನ್ನ ನೆಮ್ಮದಿ ಅಭಿಮಾನವನ್ನು ಮಾತ್ರ ಕೆಡಿಸುವುದಲ್ಲ, ಪೂರ್ತಿ ಕುಟುಂಬಸ್ಥರ ಅಭಿಮಾನ, ಗೌರವವನ್ನೂ ಜಾಲಾಡುತ್ತಾನೆ.

ಇಂತಹ ಜನರ ಜೀವನ ಕೆಲವೊಮ್ಮೆ ಒಂದು ತಮಾಷೆಯಾಗಿ ಬಿಡುತ್ತದೆ. ನೆರೆಹೊರೆಯವರು ಆಗಾಗ ಇದನ್ನು ನೋಡುತ್ತಾ ಇರುತ್ತಾರೆ. ವಾಸ್ತವದಲ್ಲಿ ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಅವನ ಮನಸ್ಸು, ಅವನ ಬುದ್ಧಿ, ಅವನ ಸ್ವಭಾವ, ಅವನ ಮಾತು ಮತ್ತು ಕೃತಿಯಲ್ಲಿ ಸುಧಾರಣೆ ಮಾಡುವುದರಲ್ಲಿ ಅಡಕವಾಗಿರುತ್ತದೆ. ಅವನಿಗೆ ತಗಲಿರುವ ರೋಗಕ್ಕೆ ಚಿಕಿತ್ಸೆ ಯಾವುದೇ ವೈದ್ಯರ ಬಳಿಯಲ್ಲಿಲ್ಲ. ವೈದ್ಯರು ಶಾರೀರಿಕ ರೋಗಗಳಿಗಷ್ಟೆ ಔಷಧಿ ಕೊಡುತ್ತಾರೆ. ಸ್ವಭಾವ ಮತ್ತು ನಡವಳಿಕೆಗೆ ಸಂಬಂಧಿಸಿದ ರೋಗಕ್ಕೆ ಅವರು ಮದ್ದು ಕೊಡುವುದಿಲ್ಲ.

ದಾಂಪತ್ಯ ಜೀವನದಲ್ಲಿ ಸಮಸ್ಯೆ ಉಂಟಾದಾಗ ಅದರ ಸಂಪೂರ್ಣ ಹೊಣೆಗಾರಿಕೆಯನ್ನು ಪತ್ನಿಯು ಪತಿಗೆ ಕಟ್ಟುವುದು ರೂಢಿ. ವಾಸ್ತವದಲ್ಲಿ ಹೆಚ್ಚಿನ ಸಂದರ್ಭದಲ್ಲಿ ತಪ್ಪು ಪುರುಷನಿಂದಾಗಿರುತ್ತದೆ. ಇನ್ನು ಕೆಲವು ಮನೆಗಳಲ್ಲಿ ಪತ್ನಿ ಪತಿಯನ್ನು ಗೌರವಿಸುವುದಿಲ್ಲ. ಅವಳ ಹೃದಯದಲ್ಲಿ ಪತಿಯ ಕುರಿತು ಕಾಳಜಿ ಇಲ್ಲ. ಇದರಿಂದ ಪತಿ ಸದಾ ಚಿಂತಾಕ್ರಾಂತನಾಗಿರುವುದು ಕಂಡು ಬರುತ್ತದೆ. ಆದರೆ ಇಲ್ಲಿ ಗಮನಿಸಬೇಕಾದ ಸಂಗತಿ ಅವಳು ಹಾಗೆ ಏಕೆ ಮಾಡುತ್ತಾಳೆ ಎನ್ನುವುದಾಗಿದೆ. ಅವಳ ಮಾತಿನಲ್ಲಿ ಜೇನಿನ ಮಾಧುರ್ಯ ಕಣ್ಮರೆಯಾಗಲು ಕಾರಣವಾದರೂ ಏನು?

ನೀವು ನಿಮ್ಮೊಳಗೆ ಇದಕ್ಕೆ ಕಾರಣವನ್ನು ಅನ್ವೇಷಿಸಿದರೆ ಖಂಡಿತ ಅದು ನಿಮಗೆ ಲಭಿಸುತ್ತದೆ. ಅದೇ ಪ್ರಕಾರ ಪ್ರವಾದಿ(ﷺ) ಯವರು ಓರ್ವ ಪತಿಯಾಗಿ ನಿರ್ವಹಿಸಿದ ಪಾತ್ರವನ್ನು ಅವಲೋಕನ ಮಾಡಿದರೂ ಸಮಸ್ಯೆಗೆ ಪರಿಹಾರ ಲಭಿಸುತ್ತದೆ. ವಿವಾಹಕ್ಕಿಂತ ಮೊದಲು ಸರಿಯಾಗಿ ಪರಿಶೀಲಿಸಿಕೊಂಡು ನೆಂಟಸ್ತಿಕೆ ಬೆಳೆಸಬೇಕು. ಆ ಕುರಿತು ಕುಟುಂಬದ ಹಿರಿಯರೊಂದಿಗೆ ವಿಚಾರ ವಿಮರ್ಶೆ ನಡೆಸಬೇಕು. ಅವರಿಗೆ ಸರಿ ಯಾವುದು? ತಪ್ಪು ಯಾವುದು? ಎಂಬ ಬಗ್ಗೆ ಹೆಚ್ಚಿನ ಅನುಭವ ಇರುತ್ತದೆ.

ವಿವಾಹದ ನಂತರ ಸಂಪೂರ್ಣವಾಗಿ ಕುಟುಂಬ ಪರಿಪಾಲನೆಯ ಕಾರ್ಯದಲ್ಲಿ ತೊಡಗಬೇಕು. ಒಂದು ಮನೆಯನ್ನು ನಿರ್ಮಿಸಿದ ನಂತರ ಸ್ವಯಂ ಅದನ್ನು ನಾಶಪಡಿಸುವುದನ್ನು ಯಾರೂ ಬುದ್ಧಿವಂತಿಕೆ ಎಂದು ಹೇಳಲಾರರು. ಅನುಕೂಲಕರ ಪರಿಸ್ಥಿತಿಯಲ್ಲಿ ಎಲ್ಲವೂ ಸುಗಮವಾಗಿ ಸಾಗುತ್ತದೆ. ಪ್ರತಿಕೂಲ ಪರಿಸ್ಥಿತಿಯಲ್ಲಿ ಸುಗಮವಾಗಿ ನಡೆಯುವಂತೆ ಮಾಡಬೇಕು. ಅದುವೇ ಪುರುಷತ್ವ.

ಎಂದಿನ ತನಕ ಮೆದುಳಿನಲ್ಲಿ ಪತ್ನಿಯ ಕುರಿತು ನನಗೆ ತಕ್ಕವಳಲ್ಲ, ಸರ್ವ ಸಮಸ್ಯೆಗಳಿಗೂ ಕಾರಣ ಇವಳು, ಇವಳಿಂದ ಬೇಗ ಮುಕ್ತಿ ಪಡೆಯಬೇಕೆಂಬ ಚಿಂತನೆಗಳು ಮನೆ ಮಾಡಿಕೊಂಡಿರುತ್ತದೋ ಅಂದಿನ ತನಕ ಅವನು ಏನಾದರೊಂದು ಎಡವಟ್ಟು ಮಾಡುತ್ತಲೇ ಇರುತ್ತಾನೆ. ಇದು ಕೇವಲ ಮನೆಯಲ್ಲಿ ಜಗಳಕ್ಕೆ ಕಾರಣವಾಗುವುದು ಮಾತ್ರವಲ್ಲ. ಇದರಿಂದ ಪತಿ–ಪತ್ನಿಯರ ನಡುವೆ ಅಂತರ ಹೆಚ್ಚಾಗುತ್ತಾ ಹೋಗುತ್ತದೆ. ಪತ್ನಿಯ ಹೃದಯದಲ್ಲಿ ಅನುರಕ್ತತೆಯ ಭಾವನೆ ಉಂಟಾಗುತ್ತದೆ. ಜೀವನಕ್ಕೆ ಭದ್ರತೆ ಇಲ್ಲ, ಸುರಕ್ಷತೆ ಇಲ್ಲವೆಂಬ ಭಾವನೆ ಅವಳನ್ನು ಅವಲ ಪ್ರಕೃತಿಗೆ ವ್ಯತಿರಿಕ್ತವಾದ ನಿರ್ಧಾರಗಳನ್ನು ಕೈಗೊಳ್ಳುವ ಅನಿವಾರ್ಯತೆಗೆ ತಲುಪಿಸುತ್ತದೆ.

ಪರಿಸ್ಥಿತಿ ಈ ಹಂತಕ್ಕೆ ತಲುಪಿದರೆ ಮತ್ತೆ ಮನೆ ದುರಸ್ತಿಗೊಳ್ಳುವುದಿಲ್ಲ. ಅಲ್ಲಿ ಶಾಂತಿ-ನೆಮ್ಮದಿ ನೆಲೆಸಲು ಸಾಧ್ಯವಿಲ್ಲ. ಆದ್ದರಿಂದ ಪತ್ನಿಯ ಒಂದು ಸ್ವಭಾವ ಹಿಡಿಸದಿದ್ದರೆ ಅವಳಿಂದ ಸ್ವೀಕೃತಿಯಾಗುವ ಯಾವುದಾದರೂ ಗುಣವನ್ನು ಅನ್ವೇಷಿಸಿಕೊಂಡು ಹೊಂದಾಣಿಕೆಯಿಂದ ಜೀವನ ಸಾಗಿಸಬೇಕೇ ಹೊರತು ಅವಳನ್ನು ತೊರೆಯಬೇಕೆನ್ನುವ ಇರಾದೆಯನ್ನು ನೆಚ್ಚಿಕೊಳ್ಳಲೇಬಾರದು.

ಸ್ವಯಂ ಅತ್ಮಾವಲೇಕನ ಮಾಡುವುದು, ಪತ್ನಿಯನ್ನು ಸಂಸ್ಕರಿಸುವುದು ಈ ಎರಡು ಕಾರ್ಯಗಳನ್ನು ಜೊತೆಯಾಗಿ ನಿರ್ವಹಿಸುತ್ತಾ ಸಾಗಿದರೆ ಕೆಲವೇ ದಿನಗಳಲ್ಲಿ ಮನೆಯ ಸುತ್ತ ಕವಿದ ಕಾರ್ಮೋಡಗಳು ಸರಿದು ಬೆಳದಿಂಗಳು ಗೋಚರಿಸುವುದು ಖಂಡಿತ. ಜೀವನದಲ್ಲಿ ಕಹಿ ಅಳಿದು ಸವಿ ಅನುಭವಕ್ಕೆ ಬರುವುದು ನಿಶ್ಚಯ. ಮನೆಯ ಅಂಗಳದಲ್ಲಿ ಸಂತೋಷದ ಹೊನಲು ಹರಿಯಲು ಪ್ರಾರಂಭವಾಗುವುದನ್ನು ನೀವು ಕಾಣುವಿರಿ.

ಅಲ್ಲಾಹು ನಮ್ಮೆಲ್ಲರ ಮನೆಗಳನ್ನು ಸುಖ-ಸಮೃದ್ಧಿಯಿಂದ ತುಂಬಲಿ. ಕುಟುಂಬದಲ್ಲಿ ಸಾಮರಸ್ಯತೆ ಉಂಟುಮಾಡಲಿ. ದಾಂಪತ್ಯ ಜೀವನದಲ್ಲಿ ಪ್ರೀತಿ-ವಿಶ್ವಾಸವೆಂಬ ಸುವಾಸನೆ ಕಡಿಮೆಯಾಗದಂತೆ, ನಂಬಿಕೆ ಮತ್ತು ಸಂತೃಪ್ತಿಗಳೆಂಬ ಮಾಧುರ್ಯ ಸದಾ ನೆಲೆಸಿರುವಂತೆ ಅನುಗ್ರಹಿಸಲಿ. ಆಮೀನ್. ■

# ಕರ್ಮಫಲವನ್ನು ಮೃತರಿಗೆ ಅರ್ಪಿಸುವುದು

✍ ಶೈಖ್ ಮುಹಮ್ಮದ್ ಇಬ್ನ್ ಅಬ್ದಿಲ್ ವಹ್ಹಾಬ್ ಅಲ್‌ಉಕೈಲ್

ಮೃತರು ಜೀವಂತವಿರುವವರ ಕರ್ಮಗಳಿಂದ ಎರಡು ಮಾರ್ಗಗಳ ಮೂಲಕ ಪ್ರತಿಫಲವನ್ನು ಪಡೆಯುತ್ತಾರೆಂಬ ವಿಷಯದಲ್ಲಿ ಅಹ್ಲುಸ್ಸುನ್ನದವರು ಒಮ್ಮತಾಭಿಪ್ರಾಯದಲ್ಲಿದ್ದಾರೆ.

**ಮೊದಲನೆಯದು:** ಮೃತರು ತಮ್ಮ ಬದುಕಿನ ಕಾಲದಲ್ಲಿ ಮಾಡಿಟ್ಟ ಕರ್ಮಗಳ ಮೂಲಕ.

**ಎರಡನೆಯದು:** ಜೀವಂತವಿರುವವರು ಮಾಡುವ ಸತ್ಕರ್ಮಗಳ ಮೂಲಕ. ಅಂದರೆ ಅವರು ಅಲ್ಲಾಹನ ಸಾಮೀಪ್ಯವನ್ನು ಬಯಸಿ ಆ ಕರ್ಮಗಳನ್ನು ಮಾಡಿ ಅದರ ಫಲವನ್ನು ಮೃತರಿಗೆ ಅರ್ಪಿಸಿದರೆ ಅಲ್ಲಾಹು ಉದ್ದೇಶಿಸಿದರೆ ಅದು ಅವರಿಗೆ ತಲುಪುತ್ತದೆ.

ಆದರೆ ಕೆಲವು ಇಬಾದತ್‌ಗಳ ವಿಷಯದಲ್ಲಿ, ಅಂದರೆ ಅವು ಮೃತರಿಗೆ ತಲುಪುತ್ತದೋ ಇಲ್ಲವೋ ಎಂಬ ವಿಷಯದಲ್ಲಿ ವಿದ್ವಾಂಸರಿಗೆ ಎರಡು ಅಭಿಪ್ರಾಯಗಳಿವೆ.[1]

## ಮೊದಲನೆ ಅಭಿಪ್ರಾಯ:

ಮನುಷ್ಯನು ಯಾವುದೇ ಸತ್ಕರ್ಮವನ್ನು ಮಾಡಿ ಅದರ ಫಲವನ್ನು ಮೃತ ಮುಸಲ್ಮಾನನಿಗೆ ಅರ್ಪಿಸಿದರೆ ಅದು ಸಿಂಧುವಾಗಿದೆ ಮತ್ತು ಮೃತರಿಗೆ ಆ ಫಲ ತಲುಪುತ್ತದೆ. ಇದು ಇಮಾಂ ಅಹ್ಮದ್, ಅಬೂ ಹನೀಫ ಮತ್ತು ಅಶ್ಶಾಫಿಈಯವರ ಕೆಲವು ಅನುಯಾಯಿಗಳ ಅಭಿಪ್ರಾಯ.[2]

ಅವರು ಹೇಳುತ್ತಾರೆ: ಮೃತರಿಗೆ ಒಳಿತಾದ ಎಲ್ಲ ಕರ್ಮಗಳೂ ತಲುಪುತ್ತದೆ. ಈ ವಿಷಯದಲ್ಲಿ ಅನೇಕ ಹದೀಸ್‌ಗಳು ವರದಿಯಾಗಿವೆ.[3]

## ಎರಡನೆ ಅಭಿಪ್ರಾಯ:

ಯಾವುದೆಲ್ಲ ಸತ್ಕರ್ಮಗಳನ್ನು ಅರ್ಪಿಸಿದರೆ ಮೃತರಿಗೆ ತಲುಪುತ್ತದೆಯೆಂದು ಕುರ್‌ಆನ್–ಸುನ್ನತ್ತಿನಲ್ಲಿ ಸ್ಪಷ್ಟವಾಗಿ ಹೇಳಿದೆಯೋ ಅದರ ಹೊರತು ಇನ್ನೇನೂ ಮೃತರಿಗೆ ತಲುಪುವುದಿಲ್ಲ. ಅಂದರೆ ಪ್ರಾರ್ಥನೆ, ದಾನಧರ್ಮ, ಹಜ್ಜ್ ಮತ್ತು ಉಮ್ರ. ಇವುಗಳಲ್ಲದ ಇತರ ಯಾವುದೇ ಕರ್ಮಗಳೂ ಮೃತರಿಗೆ ತಲುಪುವುದಿಲ್ಲ. ಕರ್ಮಫಲವನ್ನು ಅರ್ಪಿಸುವ ಉದ್ದೇಶದಿಂದ ಆ ಕರ್ಮಗಳನ್ನು ಮಾಡುವುದಕ್ಕೆ ಶರೀಅತ್ ಅವಕಾಶ ನೀಡುವುದಿಲ್ಲ. ಇದು ಇಮಾಂ ಅಶ್ಶಾಫಿಈಯವರ ಮತ್ತು ಇಮಾಂ ಮಾಲಿಕ್‌ರವರ ಪ್ರಸಿದ್ಧ ಅಭಿಪ್ರಾಯವಾಗಿದೆ. [4]

## ಮೊದಲನೆ ವಿಭಾಗದವರ ಪುರಾವೆಗಳು:

ಪ್ರಾರ್ಥನೆ ಮತ್ತು ದಾನಧರ್ಮದ ಪ್ರತಿಫಲವು ಮೃತರಿಗೆ ತಲುಪುತ್ತದೆ ಎನ್ನುವುದಕ್ಕೆ ಪುರಾವೆಯಾಗಿ ಮೊದಲನೆ ವಿಭಾಗದವರು ಪ್ರವಾದಿ (ﷺ) ಯವರ ಈ ಹದೀಸನ್ನು ಉಲ್ಲೇಖಿಸುತ್ತಾರೆ.

1 ಶರ್ಹುಲ್ ಅಕೀದತಿ ತ್ತಹಾವಿಯ್ಯ 452

2 ಅಲ್‌ಮುಗ್ನಿ 2/567 ಇಮಾಂ ಅನ್ನವವೀಯವರ ಅಲ್‌ಮಜ್ಮೂಅ್ 15/521

3 ಮಜ್ಮೂಉಲ್ ಫತಾವಾ (24/309-325)

4 ಶರ್ಹುಲ್ ಅಕೀದತಿ ತ್ತಹಾವಿಯ್ಯ 452 ಇಮಾಂ ಅನ್ನವವೀಯವರ ಅಲ್‌ಮಜ್ಮೂಅ್ 15/521

«إِذَا مَاتَ الْإِنْسَـانُ انْقَطَعَ عَنْهُ عَمَلُهُ إِلَّا مِنْ ثَلَاثَةٍ: إِلَّا مِـنْ صَدَقَـةٍ جَارِيَةٍ أَوْ عِلْـمٍ يُنْتَفَعُ بِـهِ أَوْ وَلَدٍ صَالِـحٍ يَدْعُو لَهُ».

"ಮನುಷ್ಯನು ಮರಣ ಹೊಂದಿದರೆ ಅವನ ಎಲ್ಲ ಕರ್ಮಗಳೂ (ಅವನೊಂದಿಗೆ ಸಂಪರ್ಕವನ್ನು) ಕಡಿಯುತ್ತವೆ. ಆದರೆ ಮೂರು ಮಾರ್ಗಗಳ ಹೊರತು. ಹರಿಯುತ್ತಿರುವ ದಾನಧರ್ಮ, ಅವನ ಮರಣಾನಂತರ ಪ್ರಯೋಜನ ಪಡೆಯಲಾಗುತ್ತಿರುವ ಜ್ಞಾನ ಮತ್ತು ಅವನಿಗಾಗಿ ಪ್ರಾರ್ಥಿಸುವ ಸಜ್ಜನ ಸಂತಾನ." [5]

**ಎರಡನೆ ಪುರಾವೆ:**

ಆಯಿಶಾ(ರ) ರವರ ಹದೀಸ್:

أَنَّ رَجُـلًا أَتَـى النَّبِـيَّ صَلَّى اللَّـهُ عَلَيْهِ وَسَـلَّمَ فَقَـالَ: يَا رَسُـولَ اللَّـهِ! إِنَّ أُمِّيَ افْتُلِتَتْ نَفْسَـهَا. وَلَمْ تُـوصِ. وَأَظُنُّهَا لَوْ تَكَلَّمَـتْ تَصَدَّقَتْ. أَفَلَهَا أَجْـرٌ إِنْ تَصَدَّقْـتُ عَنْهَا؟ قَـالَ: «نَعَمْ».

ಒಬ್ಬ ವ್ಯಕ್ತಿ ಪ್ರವಾದಿ(ಸ) ಯವರ ಬಳಿಗೆ ಬಂದು ಹೇಳುತ್ತಾರೆ: "ಓ ಅಲ್ಲಾಹನ ಸಂದೇಶವಾಹಕರೇ! ನನ್ನ ತಾಯಿ ಅನಿರೀಕ್ಷಿತವಾಗಿ ಮರಣಹೊಂದಿದರು. ಅವರು ಯಾವುದೇ ವಸಿಯ್ಯತ್ (ಉಯಿಲು) ಮಾಡಿರಲಿಲ್ಲ. (ಮರಣದ ವೇಳೆ) ಆಕೆ ಮಾತನಾಡುತ್ತಿದ್ದರೆ ದಾನಧರ್ಮ ಮಾಡಲು ಹೇಳುತ್ತಿದ್ದಳು. ನಾನು ಆಕೆಯ ಪರವಾಗಿ ದಾನಧರ್ಮ ಮಾಡಿದರೆ ಅದರ ಪ್ರತಿಫಲ ಆಕೆಗೆ ದೊರಕುತ್ತ-ದೆಯೇ?" ಪ್ರವಾದಿ(ಸ) ಯವರು ಹೇಳಿದರು: "ಹೌದು". [6]

**ಮೂರನೆ ಪುರಾವೆ:**

ಇಬ್ನ್ ಅಬ್ಬಾಸ್(ರ) ರವರ ಹದೀಸ್:

أَنَّ امْرَأَةً مِـنْ جُهَيْنَةَ جَاءَتْ إِلَى النَّبِـيِّ صَلَّى اللَّهُ عَلَيْهِ وَسَـلَّمَ فَقَالَتْ: إِنَّ أُمِّي نَذَرَتْ أَنْ تَحُجَّ. فَلَمْ تَحُجَّ حَتَّـى مَاتَتْ. أَفَأَحُـجُّ عَنْهَا؟ قَـالَ: «نَعَمْ، حُجِّي عَنْهَـا. أَرَأَيْـتِ لَـوْ كَانَ عَلَى أُمِّـكِ دَيْنٌ أَكُنْـتِ قَاضِيَةً؟ اقْضُوا اللَّـهَ! فَاللَّهُ أَحَـقُّ بِالْوَفَاءِ».

ಜುಹೈನ ಗೋತ್ರದ ಒಬ್ಬ ಮಹಿಳೆ ಪ್ರವಾದಿ(ಸ) ಯವರ ಬಳಿಗೆ ಬಂದು ಹೇಳಿದರು: "ನನ್ನ ತಾಯಿ ಹಜ್ಜ್ ನಿರ್ವಹಿಸಲು ಹರಕೆ ಹೊತ್ತಿದ್ದಳು. ಆದರೆ ಮರಣದ ತನಕ ಆಕೆಗೆ ಹಜ್ಜ್ ನಿರ್ವಹಿಸಲು ಸಾಧ್ಯವಾಗಿಲ್ಲ. ಆಕೆಯ ಪರವಾಗಿ ನಾನು ಹಜ್ಜ್ ನಿರ್ವಹಿಸ-ಬಹುದೇ?" ಪ್ರವಾದಿ(ಸ) ಯವರು ಹೇಳಿದರು: "ಆಕೆಯ ಪರವಾಗಿ ಹಜ್ಜ್ ನಿರ್ವಹಿಸಿರಿ. ನಿಮ್ಮ ತಾಯಿಗೆ ಸಾಲ ಮರುಪಾವತಿ ಮಾಡುವುದು ಬಾಕಿಯಿದ್ದರೆ ತಾವು ಅದನ್ನು ಪಾವತಿ ಮಾಡು-ತ್ತಿರಲಿಲ್ಲವೇ? ಅಲ್ಲಾಹನ ಸಾಲವನ್ನು ಮರುಪಾವತಿ ಮಾಡಿರಿ. ಮರುಪಾವತಿ ಮಾಡಲು ಹೆಚ್ಚು ಅರ್ಹನಾಗಿರುವವನು ಅಲ್ಲಾಹು." [7]

**ನಾಲ್ಕನೇ ಪುರಾವೆ:**

ಆಯಿಶಾ(ರ) ರವರ ಹದೀಸ್:

أَنَّ رَسُـولَ اللَّهِ صَلَّى اللَّهُ عَلَيْهِ وَسَـلَّمَ قَالَ: «مَنْ مَـاتَ وَعَلَيْهِ صِيَامٌ صَامَ عَنْـهُ وَلِيُّهُ».

ಅಲ್ಲಾಹನ ಸಂದೇಶವಾಹಕರು(ಸ) ಹೇಳಿದರು: "ಉಪವಾಸ ಆಚರಿಸಲು ಬಾಕಿಯಿದ್ದು ಯಾರಾದರೂ ಮರಣಹೊಂದಿದರೆ ಅವರ ಪರವಾಗಿ ಅವರ ಆಪ್ತರು ಉಪವಾಸ ಆಚರಿಸಲಿ." [8]

ಉಪವಾಸ ಆಚರಿಸುವ ಈ ಇಬಾದತ್ತನ್ನು ಹನಫಿಗಳು ಈ ಪಟ್ಟಿಯಿಂದ ಹೊರತುಪಡಿಸಿದ್ದಾರೆ. ಅವರು ಹೇಳುತ್ತಾರೆ: ಮೃತರ ಪರವಾಗಿ ಆಹಾರ ನೀಡಬೇಕು, ಆದರೆ ಉಪವಾಸ ಆಚರಿಸಬಾ-ರದು. ಅವರ ಪುರಾವೆ ಇಬ್ನ್ ಅಬ್ಬಾಸ್(ರ) ರವರ ಹದೀಸ್:

«لَا يُصَلِّـي أَحَدٌ عَـنْ أَحَدٍ. وَلَا يَصُـومُ أَحَدٌ عَنْ أَحَـدٍ. وَلَكِـنْ يُطْعِـمُ عَنْهُ مَـكَانَ كُلِّ يَـوْمٍ مُدًّا مِـنْ حِنْطَةٍ».

6 ಅಲ್‌ಬುಖಾರಿ ಮತ್ತು ಮುಸ್ಲಿಮ್

ಪ್ರವಾದಿ(ﷺ) ಯವರು ಹೇಳುತ್ತಾರೆ: “ಯಾರೂ ಯಾರ ಪರವಾಗಿಯೂ ನಮಾಝ್ ನಿರ್ವಹಿಬಾರದು. ಯಾರೂ ಯಾರ ಪರವಾಗಿಯೂ ಉಪವಾಸ ಆಚರಿಸಬಾರದು. ಆದರೆ ಒಂದೊಂದು ದಿನಕ್ಕೆ ಬದಲಾಗಿ ಒಬ್ಬೊಬ್ಬರಿಗೆ ಒಂದೊಂದು ಮುದ್ದ್ ಗೋಧಿಯ ಆಹಾರ ನೀಡಬೇಕು.” [9]

ಅವರು ಹೇಳುತ್ತಾರೆ: ಸಾಲವನ್ನು ಮರುಪಾವತಿ ಮಾಡಿದರೆ ಮೃತರು ಹೊಣೆಯಿಂದ ಮುಕ್ತರಾಗುತ್ತಾರೆಂಬ ಬಗ್ಗೆ ವಿದ್ವಾಂಸರು ಒಮ್ಮತಾಭಿಪ್ರಾಯದಲ್ಲಿದ್ದಾರೆ. ಅದು ಅಪರಿಚಿತ ವ್ಯಕ್ತಿಯಿಂದಾದರೂ ಸರಿ. ಮೃತನ ಸೊತ್ತಿನಿಂದಲ್ಲದಿದ್ದರೂ ಸರಿ. ಅಬೂ ಕತಾದರವರ ಹದೀಸ್ ಇದಕ್ಕೆ ಪುರಾವೆಯಾಗಿದೆ. ಅವರು ಒಬ್ಬ ಮೃತನ ಎರಡು ದೀನಾರ್‌ಗಳನ್ನು ಮರುಪಾವತಿ ಮಾಡುವ ಹೊಣೆಯನ್ನು ವಹಿಸಿಕೊಂಡರು. ಅವರು ಅದನ್ನು ಮರುಪಾವತಿ ಮಾಡಿದಾಗ ಪ್ರವಾದಿ(ﷺ) ಯವರು ಹೇಳಿದರು:

«الْآنَ بَرَدَتْ جِلْدَتُهُ».

“ಈಗ ಅವನ ಚರ್ಮವು ತಂಪಾಯಿತು.” [10]

ಮೊದಲನೆ ಅಭಿಪ್ರಾಯದವರು ಹೇಳುವ ಪ್ರಕಾರ ಪ್ರತಿಫಲವು ಕರ್ಮವೆಸಗಿದವನ ಹಕ್ಕು. ಅವನು ಅದನ್ನು ತನ್ನ ಸಹೋದರ ಮುಸಲ್ಮಾನನಿಗೆ ಉಡುಗೊರೆಯಾಗಿ ಅರ್ಪಿಸಿದರೆ ಅದನ್ನು ತಡೆಯುವವರಿಲ್ಲ. ಉದಾ: ಇದು ಅವನು ತನ್ನ ಜೀವನಕಾಲದಲ್ಲಿ ತನ್ನ ಸಂಪತ್ತಿನಿಂದ ಒಂದಂಶವನ್ನು ಒಬ್ಬರಿಗೆ ಉಡುಗೊರೆಯಾಗಿ ಕೊಟ್ಟು ಮರಣಾನಂತರ ಆ ವ್ಯಕ್ತಿಯಿಂದ ಅದನ್ನು ಪಡೆಯುವಂತೆಯಾಗಿದೆ. ಉಪವಾಸ ಮುಂತಾದ ದೈಹಿಕ ಆರಾಧನೆಗಳ ಪ್ರತಿಫಲವು ಮೃತರಿಗೆ ತಲುಪುತ್ತದೆಯೆಂದು ಶರೀಅತ್ ಸೂಚಿಸಿದೆ. ಉಪವಾಸವೆಂದರೆ ಒಂದು ನಿಯ್ಯತ್ತಿನ ಮೂಲಕ ಅದನ್ನು ಅಸಿಂಧುಗೊಳಿಸುವ ವಸ್ತುಗಳಿಂದ ದೇಹವನ್ನು ನಿಯಂತ್ರಿಸುವುದು. ಇದರ ಪ್ರತಿಫಲವು ಮೃತರಿಗೆ ತಲುಪುತ್ತದೆಯೆಂದು ಶರೀಅತ್ತಿನಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಹೀಗಿರುವಾಗ ಕುರ್‌ಆನ್ ಪಾರಾಯಣ ಕೂಡ ನಿಯ್ಯತ್ ಇರುವ ಒಂದು ಕರ್ಮವಾಗಿದ್ದು ಅದರ ಪ್ರತಿಫಲ ಕೂಡ ತಲುಪಬೇಕಾಗಿದೆ. [11]

## ಎರಡನೆ ಅಭಿಪ್ರಾಯದವರ ಪುರಾವೆಗಳು:

ಪ್ರಾರ್ಥನೆ, ದಾನಧರ್ಮ, ಹಜ್ಜ್ ಮುಂತಾದ ಕರ್ಮಗಳ ಪ್ರತಿಫಲವು ತಲುಪುತ್ತದೆಯೆನ್ನುವುದಕ್ಕೆ ಎರಡನೆ ಅಭಿಪ್ರಾಯದವರು ಮೊದಲನೆ ವಿಭಾಗದವರ ಅದೇ ಪುರಾವೆಗಳನ್ನು ಆಧಾರವಾಗಿ ತೋರಿಸುತ್ತಾರೆ.

ಇಮಾಂ ಅಶ್ಶಾಫಿಈ(ರ) ಹೇಳುತ್ತಾರೆ:

“ಮೃತರಿಗೆ ಇತರರ ಕರ್ಮ ಮತ್ತು ಜ್ಞಾನಗಳಲ್ಲಿ ಮೂರು ವಸ್ತುಗಳು ಮಾತ್ರ ತಲುಪುತ್ತವೆ. ಅವರ ಪರವಾಗಿ ನಿರ್ವಹಿಸಲಾಗುವ ಹಜ್ಜ್ ಅವರ ಪರವಾಗಿ ದಾನ ಮಾಡಲಾಗುವ ಅಥವಾ ಮರುಪಾವತಿ ಮಾಡಲಾಗುವ ಸಂಪತ್ತು ಮತ್ತು ಮೂರನೆಯದು ಪ್ರಾರ್ಥನೆ. ಇವುಗಳ ಹೊರತಾದ ನಮಾಝ್, ಉಪವಾಸ ಮುಂತಾದವುಗಳ ಪ್ರತಿಫಲ ಅವುಗಳನ್ನು ನಿರ್ವಹಿಸಿದವನಿಗೆ ಮಾತ್ರ ಸೀಮಿತವೇ ಹೊರತು ಮೃತರಿಗೆ ವರ್ಗಾಯಿಸಿದರೆ ಅದು ಅವರಿಗೆ ತಲುಪುವುದಿಲ್ಲ. ನಾವಿದನ್ನು ಹೇಳುವುದು ವಿಶೇಷವಾಗಿ ಹಜ್ಜ್‌ನ ಬಗ್ಗೆ ಸುನ್ನತ್ತಿನಲ್ಲಿ ವರದಿಯಾದ ಪುರಾವೆಗಳಿಂದ. ಕಿಯಾಸ್ ಮಾಡುವ ಮೂಲಕ ಉಮ್ರ ಕೂಡ ಇದೇ ವಿಧಿಯನ್ನು ಹೊಂದಿದೆ. ಆದರೆ ಅದು ಕಡ್ಡಾಯಕ್ಕೆ ಮಾತ್ರ ಅನ್ವಯವೇ ಹೊರತು ಐಚ್ಛಿಕ ಕರ್ಮಕ್ಕಲ್ಲ. ಯಾರೂ ಯಾರ ಪರವಾಗಿಯೂ ಐಚ್ಛಿಕ ಹಜ್ಜ್ ನಿರ್ವಹಿಸಬಾರದು. ಕಾರಣ ಅದು ದೈಹಿಕ ಕರ್ಮ.

ಸಂಪತ್ತಿನ ವಿಷಯದಲ್ಲಿ ಹೇಳುವುದಾದರೆ, ಅಲ್ಲಾಹನ ಹಕ್ಕುಗಳಾದ ಝಕಾತ್ ಮುಂತಾದವುಗಳನ್ನು ಇನ್ನೊಬ್ಬರಿಂದ ಕೊಡಿಸುವುದಕ್ಕೆ ಅನುಮತಿಯಿದೆ. ಕಾರಣ, ಇಲ್ಲಿ ಉದ್ದೇಶಿಸುವುದು ಅದನ್ನು ಅದರ ಹಕ್ಕುದಾರರಿಗೆ ಸಂದಾಯ ಮಾಡುವುದೇ ಹೊರತು ದೈಹಿಕ ಕರ್ಮವನ್ನಲ್ಲ. ನನ್ನ ಸಂಪತ್ತಿನಲ್ಲಿ ಅಲ್ಲಾಹು ಕಡ್ಡಾಯ ಮಾಡಿರುವುದನ್ನು ನನ್ನ ಆಜ್ಞೆಯ ಮೇರೆಗೆ ಯಾರಾದರೂ ನಿರ್ವಹಿಸಿದರೆ ಅದು ನನಗೆ ಕಡ್ಡಾಯವಾಗಿರುವುದನ್ನು ನಿರ್ವಹಿಸಿದಂತಾಗುತ್ತದೆ.

ಇನ್ನು ಪ್ರಾರ್ಥನೆಯ ಬಗ್ಗೆ ಹೇಳುವುದಾದರೆ ಅಲ್ಲಾಹು ಇದನ್ನು ಜನರಿಗೆ ಪ್ರೋತ್ಸಾಹಿಸಿದ್ದಾನೆ. ಅವನ ಸಂದೇಶವಾಹಕರು(ﷺ) ಇದನ್ನು ಆಜ್ಞಾಪಿಸಿದ್ದಾರೆ. ಒಬ್ಬ ವ್ಯಕ್ತಿ ಬದುಕಿರುವಾಗ ಆತನಿಗಾಗಿ ಪ್ರಾರ್ಥಿಸಬಹುದಾದರೆ ಆತ ಮರಣಹೊಂದಿದ ಬಳಿಕವೂ ಆತನಿಗಾಗಿ ಪ್ರಾರ್ಥಿಸಬಹುದಾಗಿದೆ. ಅಲ್ಲಾಹು ಇಚ್ಛಿಸಿದರೆ ಈ

9 ಅತ್ತಹಾವೀ ಮುಶ್ಕಿಲುಲ್ ಆಸಾರ್‌ನಲ್ಲಿ ಇಬ್ನ್ ಅಬ್ಬಾಸ್(ರ) ರಿಂದ ವರದಿ. ಇದರ ಸನದ್ ಸಹೀಹ್ ಆಗಿದೆ. ನೋಡಿ: ಶರ್ಹು ತ್ತಹಾವಿಯ್ಯ 453

10 ಅಲ್‌ಹಾಕಿಮ್ ಮುಸ್ತದ್ರಕ್‌ನಲ್ಲಿ (2/58) ಅವರು ಇದನ್ನು ಸಹೀಹ್ ಎಂದಿದ್ದಾರೆ ಮತ್ತು ಅದ್ದಹಬೀ ಒಪ್ಪಿದ್ದಾರೆ. ನೋಡಿ: ಅಲ್‌ಅಲ್ಬಾನಿಯವರ ಅಹ್ಕಾಮುಲ್ ಜನಾಇಝ್ (16)

11 ಅಲ್‌ಮುಗ್ನಿ 454, 455 ಅಲ್‌ಮುಗ್ನಿ 2/567 ಅಲ್‌ಇನ್ಸಾಫ್ 2/558

ಪ್ರಾರ್ಥನೆಯು ಅವನಿಗೆ ತಲುಪುತ್ತದೆ. ಬದುಕಿರುವವನಿಗೆ ಅದರ ಪ್ರತಿಫಲವನ್ನು ನೀಡಿ ಮರಣಹೊಂದಿದವನಿಗೆ ಅದರ ಪ್ರಯೋಜನವನ್ನು ತಲುಪಿಸುವುದರಲ್ಲಿ ಅಲ್ಲಾಹು ಮಹಾ ಔದಾರ್ಯವಂತನಾಗಿದ್ದಾನೆ. ಅದೇ ರೀತಿ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಪರವಾಗಿ ಐಚ್ಛಿಕ ದಾನಧರ್ಮ ಮಾಡುವುದು ಕೂಡ." [12]

ಈ ಅಭಿಪ್ರಾಯವನ್ನು ಹೊಂದಿರುವ ವಿದ್ವಾಂಸರು ಇಬಾದತ್‌ಗಳನ್ನು ಎರಡಾಗಿ ವಿಂಗಡಿಸಿದ್ದಾರೆ.

**ಒಂದು:** ಬೇರೆಯವರನ್ನು ಪ್ರತಿನಿಧಿಯಾಗಿ ಮಾಡುವುದು ಸಿಂಧುವಾಗುವ ಆರಾಧನೆಗಳು. ಉದಾ: ಆರ್ಥಿಕ ಆರಾಧನೆಗಳು.

**ಎರಡು:** ಬೇರೆಯವರನ್ನು ಪ್ರತಿನಿಧಿಯಾಗಿ ಮಾಡಿದರೆ ಸಿಂಧುವಾಗದ ಆರಾಧನೆಗಳು. ಉದಾ: ದೈಹಿಕ ಆರಾಧನೆಗಳು.

ಬೇರೆಯವರನ್ನು ಪ್ರತಿನಿಧಿಯಾಗಿ ಮಾಡುವುದಕ್ಕೆ ಅನುಮತಿಯಿರುವ ಆರ್ಥಿಕ ಆರಾಧನೆಗಳನ್ನು ಅವರು ಅನುಮತಿಸಿದರು. ಅದೇ ರೀತಿ ಕುರ್‌ಆನ್–ಸುನ್ನತ್ತಿನಲ್ಲಿ ಸ್ಪಷ್ಟವಾಗಿ ವರದಿಯಾದ ಆರಾಧನೆಗಳನ್ನು ಅವರು ಅನುಮತಿಸಿದರು. ಅವುಗಳಲ್ಲದ ಇತರ ಆರಾಧನೆಗಳನ್ನು ಅವರು ವಿರೋಧಿಸಿದರು.

## ಬಲವಾದ ಅಭಿಪ್ರಾಯ:

ಬಲವಾದ ಅಭಿಪ್ರಾಯ—ಹೆಚ್ಚು ಬಲ್ಲವನು ಅಲ್ಲಾಹು—ಎರಡನೆ ಅಭಿಪ್ರಾಯವಾಗಿದೆ. ಅಂದರೆ ಇಮಾಂ ಅಶ್ಶಾಫಿಈ, ಇಮಾಂ ಮಾಲಿಕ್ ಮತ್ತು ಅವರ ಪರವಾಗಿರುವವರ ಅಭಿಪ್ರಾಯ. ಅಂದರೆ ಕುರ್‌ಆನ್–ಸುನ್ನತ್ತಿನಲ್ಲಿ ಏನು ಬಂದಿದೆಯೋ ಅದನ್ನು ಮಾತ್ರ ನಿರ್ವಹಿಸಿ ಉಳಿದವುಗಳನ್ನು ವಿರೋಧಿಸುವುದು.

## ಅಭಿಪ್ರಾಯವನ್ನು ಪ್ರಬಲವೆಂದು ಹೇಳಲು ಕಾರಣ:

ಎರಡನೆಯ ಅಭಿಪ್ರಾಯವನ್ನು ಪ್ರಬಲ ಅಭಿಪ್ರಾಯವೆಂದು ಹೇಳಲು ಅನೇಕ ಕಾರಣಗಳಿವೆ. ಅವುಗಳಲ್ಲಿ ಕೆಲವು:

1. ಆರಾಧನೆಗಳ ವಿಷಯದಲ್ಲಿ ಮೂಲಭೂತ ನಿಯಮವೇನೆಂದರೆ ಕುರ್‌ಆನ್–ಸುನ್ನತ್ತಿನಲ್ಲಿ ಏನು ಬಂದಿದೆಯೋ ಅದಕ್ಕೆ ಸೀಮಿತಗೊಳಿಸಬೇಕು. ಯಾವುದೇ ಒಂದು ಆರಾಧನೆಯನ್ನು ಅದು ಶರೀಅತ್ತಿನಲ್ಲಿದೆಯೆನ್ನುವುದಕ್ಕೆ ಪುರಾವೆ ಸಿಗುವ ತನಕ ಅದನ್ನು ನಿರ್ವಹಿಸಬಾರದು. ಮೃತರಿಗೆ ಕರ್ಮಫಲವನ್ನು ಅರ್ಪಿಸಬಹುದಾದ ಕೆಲವು ಆರಾಧನೆಗಳನ್ನು ಮಾತ್ರ ಶರೀಅತ್ ಅಂಗೀಕರಿಸಿದೆ. ಆದ್ದರಿಂದ ಅದಲ್ಲದ ಉಳಿದವುಗಳನ್ನು ಬಿಟ್ಟುಬಿಡುವುದು ಕಡ್ಡಾಯವಾಗಿದೆ.

2. ಪ್ರವಾದಿ(ﷺ) ಯವರ ಕಾಲದಲ್ಲಾಗಲಿ, ಸಹಾಬಾಗಳ ಕಾಲದಲ್ಲಾಗಲಿ ಯಾರಾದರೂ ಕುರ್‌ಆನ್ ಪಾರಾಯಣ ಮಾಡಿ ಅದರ ಫಲವನ್ನು ಮೃತರಿಗೆ ಅರ್ಪಿಸಿದ ಬಗ್ಗೆ ದಾಖಲೆಗಳಿಲ್ಲ. ಅದೊಂದು ಉತ್ತಮ ಕಾರ್ಯವಾಗಿದ್ದರೆ ನಮಗಿಂತ ಮುಂಚೆಯೇ ಅವರದನ್ನು ಮಾಡುತ್ತಿದ್ದರು. ಅಲ್ಲಾಹು ಮತ್ತು ಅವನ ರಸೂಲರ ಧರ್ಮದ ಬಗ್ಗೆ ನಮಗಿಂತಲೂ ಹೆಚ್ಚು ಅರಿವುಳ್ಳವರು ಅವರು.

3. ಪುರಾವೆಯಿರುವ ಆರಾಧನೆಗಳ ಮೇಲೆ ಕಿಯಾಸ್ ಮಾಡಿ ಹೊಸ ಆರಾಧನೆಗಳನ್ನು ಸೃಷ್ಟಿಸುವುದು ಅಲ್ಲಾಹನ ಧರ್ಮದಲ್ಲಿ ತಮಗಿಷ್ಟವಾದ ಕಾರ್ಯಗಳನ್ನು ಸೇರ್ಪಡೆಗೊಳಿಸಲು ನೂತನವಾದಿಗಳಿಗೆ ಅವಕಾಶ ನೀಡುತ್ತದೆ.

4. ಈ ಕಾಲದ ನೂತನವಾದಿಗಳು ಕೆಲವು ಮಿಥ್ಯ ಆರಾಧನೆಗಳನ್ನು ಹೊಸದಾಗಿ ನಿರ್ಮಿಸಿದ್ದಾರೆ. ಉದಾಹರಣೆಗೆ, ಕುರ್‌ಆನ್ ಪಾರಾಯಣ ಮಾಡುವವರಿಗೆ ಕೂಲಿ ನೀಡಿ ಪಾರಾಯಣ ಮಾಡಿಸುವುದು ಮುಂತಾದ ಮರಣದ ಸಂದರ್ಭ ಮತ್ತು ಮರಣಾನಂತರ ಕೆಲವು ನಿಗದಿತ ದಿನಗಳಲ್ಲಿ ಮಾಡುವ ಅನಾಚಾರಗಳು. ಈ ದ್ವಾರವನ್ನು ಮುಚ್ಚಿದರೆ ಇಂತಹ ಅನಾಚಾರಗಳು ತನ್ನಿಂತಾನೇ ನಿಲ್ಲುತ್ತದೆ.

5. ಶರೀಅತ್ತಿನಲ್ಲಿ ಅಧಿಕೃತ ಪುರಾವೆಯ ಮೂಲಕ ಸಾಬೀತಾದ ಮೃತರಿಗೆ ಕರ್ಮಫಲವನ್ನು ಅರ್ಪಿಸುವ ಆರಾಧನೆಗಳನ್ನು ಈ ಕಾಲದ ಜನರು—ಅಲ್ಲಾಹು ದಯೆ ತೋರಿದವರ ಹೊರತು—ಮರೆತಿದ್ದಾರೆ. ಅವರು ಪುರಾವೆಯಿಲ್ಲದ್ದನ್ನು ಹಿಡಿದುಕೊಂಡಿದ್ದಾರೆ. ಆದ್ದರಿಂದ ಈ ಕಾರ್ಯಗಳನ್ನು ವಿರೋಧಿಸಿದರೆ ಜನರು ದೃಢಪಟ್ಟ ಸುನ್ನತ್ತಿನ ಕಡೆಗೆ ಮರಳಬಹುದು. ಹೆಚ್ಚು ಬಲ್ಲವನು ಅಲ್ಲಾಹು.

(ಮನ್‌ಹಜುಲ್ ಇಮಾಂ ಅಶ್ಶಾಫಿಈ(ರ) ಫೀ ಇಸ್ಬಾತಿಲ್ ಅಕೀದ ಎಂಬ ಪುಸ್ತಕದಿಂದ) ■

12 ಅಲ್‌ಉಮ್ಮ್ 4/120 ಮನಾಕಿಬು ಶ್ಶಾಫಿಈ 1/430-431

# ಜಿಝಿಯ ಮತ್ತು ಮುಸ್ಲಿಮೇತರರು

ಜಿಝಿಯ ಎಂಬ ಇಸ್ಲಾಮಿನ ಸಾಂಕೇತಿಕ ಪದವು ಜಗತ್ತಿನಲ್ಲಿ ಬಹಳಷ್ಟು ತಪ್ಪು ತಿಳುವಳಿಕೆಗೆ ಗುರಿಯಾಗಿದೆ. ಅದು ಇಸ್ಲಾಮೀ ರಾಷ್ಟ್ರಗಳಲ್ಲಿ ಅಲ್ಪಸಂಖ್ಯಾತರೊಂದಿಗೆ ಪಕ್ಷಪಾತ ತೋರಿ ಅವರನ್ನು ದ್ವಿತೀಯ ದರ್ಜೆಯ ಪ್ರಜೆಗಳೆಂದು ಪರಿಗಣಿಸುವುದರ ಸಂಕೇತವೆಂದು ಆರೋಪಿಸಲಾಗುತ್ತಿದೆ. ಮುಸ್ಲಿಮೇತರರ ಮೇಲೆ ಹೊರಿಸಲಾಗುವ ಈ ವಿಶೇಷ ತೆರಿಗೆಯ ಹಿನ್ನೆಲೆಯನ್ನು ತಿಳಿಯದಿರುವುದೇ ಈ ತಪ್ಪು ತಿಳುವಳಿಕೆಗೆ ಮತ್ತು ಟೀಕೆಗೆ ಕಾರಣವಾಗಿದೆ. ಇಸ್ಲಾಮೀ ರಾಷ್ಟ್ರಗಳಲ್ಲಿ ಎರಡು ಪ್ರಮುಖ ಕಾರಣಗಳಿಗಾಗಿ 'ಜಿಝಿಯಾ'ವನ್ನು ವಸೂಲು ಮಾಡಲಾಗುತ್ತದೆ.

ಮುಸ್ಲಿಮರು ತಮ್ಮ ಕೃಷಿ ಆದಾಯದ 10% ಮತ್ತು ಇತರ ಆದಾಯ ಮೂಲಗಳ 2.5% ವನ್ನು ಝಕಾತ್ ಬಾಬ್ತಿನಲ್ಲಿ ಸಾರ್ವಜನಿಕ ಬೊಕ್ಕಸಕ್ಕೆ ನೀಡಬೇಕು. ಇದು ಆರ್ಥಿಕ ಕರ್ತವ್ಯವಾಗಿರುವಂತೆಯೇ ಧಾರ್ಮಿಕ ಆರಾಧನಾ ಕರ್ಮವೂ ಆಗಿದೆ. ಆದ್ದರಿಂದ ಅದನ್ನು ಮುಸ್ಲಿಮೇತರರ ಮೇಲೆ ಕಡ್ಡಾಯಗೊಳಿಸುವಂತಿಲ್ಲ. ಏಕೆಂದರೆ, ಅದು ಧಾರ್ಮಿಕ ಸ್ವಾತಂತ್ರ್ಯದಲ್ಲಿ ಹಸ್ತಕ್ಷೇಪ ಮಾಡಿದಂತಾಗುವುದು. ಆದ್ದರಿಂದ ಸಮಾಜದಲ್ಲಿ ಆರ್ಥಿಕ ಸಮತೋಲನವನ್ನು ಕಾಯ್ದುಕೊಳ್ಳಲಿಕ್ಕಾಗಿ ಮುಸ್ಲಿಮೇತರ ಪೌರರ ಮೇಲೆ ಇಸ್ಲಾಮೀ ಧರ್ಮಾಚಾರಗಳ ಸಂಬಂಧವಿಲ್ಲದ ಬೇರೊಂದು ತೆರಿಗೆಯನ್ನು ಹೊರಿಸಲಾಯಿತು. ಈ ಹಿನ್ನೆಲೆಯಲ್ಲಿ ಜಿಝಿಯ ಎಂಬುದು ಸರಕಾರವು ಮುಸ್ಲಿಮ್ ಪ್ರಜೆಗಳಿಂದ ಕಡ್ಡಾಯವಾಗಿ ವಸೂಲು ಮಾಡುವ ಝಕಾತ್‌ನ ಪರ್ಯಾಯ ತೆರಿಗೆಯಾಗಿದೆ.

ಶ್ರೀಮಂತ ಮುಸ್ಲಿಮರೆಲ್ಲರೂ ಝಕಾತ್ ನೀಡಬೇಕು. ಅದರಿಂದ ಸ್ತ್ರೀಯರು, ಮಕ್ಕಳು, ವೃದ್ಧರು ಮತ್ತು ರೋಗಿಗಳಿಗೂ ವಿನಾಯಿತಿಯಿಲ್ಲ. ಆದರೆ ಜಿಝಿಯದಲ್ಲಿ ಅನೇಕ ವಿನಾಯಿತಿ ಮತ್ತು ಸೌಲಭ್ಯಗಳನ್ನು ನೀಡಲಾಗಿದೆ. ಸ್ತ್ರೀಯರು, ಮಕ್ಕಳು, ಅಂಧರು, ವೃದ್ಧರು, ಗುಣವಾಗದ ರೋಗಪೀಡಿತರು, ಹುಚ್ಚರು, ಮಠದ ಸನ್ಯಾಸಿಗಳು, ಪುರೋಹಿತರು ಮುಂತಾದವರಿಂದ ಜಿಝಿಯ ವಸೂಲು ಮಾಡುವುದಿಲ್ಲ. ಆದ್ದರಿಂದ ಜಿಝಿಯ ಮುಸ್ಲಿಮೇತರರೊಂದಿಗಿನ ಪಕ್ಷಪಾತದ ಬದಲಾಗಿ, ಆರ್ಥಿಕ ಸೌಲಭ್ಯವನ್ನು ಪಡೆಯುವ ಉಪಾಧಿಯಾಗಿದೆ.

ಒಮ್ಮೆ ಪ್ರವಾದಿ(ﷺ) ಯವರ ದ್ವಿತೀಯ ಉತ್ತರಾಧಿಕಾರಿಯಾಗಿದ್ದ ಉಮರ್ ಫಾರೂಕ್(ؓ) ಬೀದಿಯಲ್ಲಿ ಸಂಚರಿಸುತ್ತಿದ್ದರು. ಆಗ ದುರ್ಬಲ ಮತ್ತು ವಯೋವೃದ್ಧರಾಗಿದ್ದ ಓರ್ವ ಕುರುಡನನ್ನು ಸಂಧಿಸಿದರು. ಉಮರ್ ಅವರ ಭುಜದಲ್ಲಿ ಕೈಯಿರಿಸಿ "ನೀವು ಯಾರು?" ಎಂದು ಪ್ರಶ್ನಿಸಿದರು.

"ನಾನೋರ್ವ ಯಹೂದಿ"ಯೆಂದು ತಿಳಿಸಿದಾಗ ಅವರು ಪುನಃ ನಿಮ್ಮ ಈ ಸ್ಥಿತಿಗೆ ಕಾರಣವೇನೆಂದು ಪ್ರಶ್ನಿಸಿದರು.

"ನಾನು ದುರ್ಬಲ ವೃದ್ಧನಾಗಿದ್ದರೂ ಜಿಝಿಯ ಕೊಡಬೇಕಾಗಿದೆ" ಎಂದು ಹೇಳಿದರು.

ತಕ್ಷಣವೇ ಉಮ್ರ ಫಾರೂಕ್(ؓ) ಅವರನ್ನು ತಮ್ಮ ಬಿಡಾರಕ್ಕೆ ಕರೆದೊಯ್ದು ಸ್ವಲ್ಪ ಹಣದ ನೆರವು ನೀಡಿದರು. ತರುವಾಯ ಕೋಶಾಧಿಕಾರಿಗೆ ಆ ವೃದ್ಧನ ಕೈಯಲ್ಲಿ ಒಂದು ಚೀಟಿ ಬರೆದು ಕಳುಹಿಸಿದರು. ಆ ಚೀಟಿಯಲ್ಲಿ ಹೀಗೆ ಆದೇಶಿಸಲಾಗಿತ್ತು: "ಇವರಂಥ ಪ್ರಜೆಗಳನ್ನು ಗುರುತಿಸಿರಿ. ಅಲ್ಲಾಹನಾಣೆ! ನಾವು ಅವರ ಯೌವನದಿಂದ ಪ್ರಯೋಜನ ಪಡೆದು ವಾರ್ಧಕ್ಯದಲ್ಲಿ ಅವರನ್ನು ಬೀದಿಪಾಲು ಮಾಡುವುದು ನ್ಯಾಯವಲ್ಲ. ಝಕಾತಿನ ಆದಾಯದಲ್ಲಿ

ಬಡವರಿಗೂ (ಫುಕರಾಅ್), ನಿರ್ಗತಿಕರಿಗೂ (ಮಸಾಕೀನ್) ಹಕ್ಕಿದೆ. ಮುಸ್ಲಿಮರೆಂಬುದು ಫುಕರಾಅ್‌ನ ಇಂಗಿತವಾಗಿದೆ. ಇವರು ಗ್ರಂಥದವರಾಗಿರುವುದಿರಿಂದ ಮಸಾಕೀನ್‌ನಲ್ಲಿ ಸೇರುತ್ತಾರೆ.” ತರುವಾಯ ಉಮರ್ ಫಾರೂಕ್‌ರು ಆ ವೃದ್ಧನನ್ನು ಜಿಝಿಯಾದಿಂದ ಮುಕ್ತಗೊಳಿಸಿದರು.

‘ಜಿಝಿಯಾ’ ಝಕಾತ್‌ಗೆ ಪರ್ಯಾಯವಾಗಿರುವುದರಿಂದ ಮುಸ್ಲಿಮೇತರ ಪ್ರಜೆಗಳು ಮುಸ್ಲಿಮರಂತೆ ಝಕಾತ್ ನೀಡಲು ಸ್ವಯಂ ಸಿದ್ಧರಾದರೆ ಇಸ್ಲಾಮೀ ರಾಷ್ಟ್ರವು ಅವರಿಗೆ ಜಿಝಿಯಾದಿಂದ ವಿನಾಯಿತಿ ನೀಡುತ್ತದೆ. ಇತಿಹಾಸದಲ್ಲಿ ಇಂಥ ಅನೇಕ ಉದಾಹರಣೆಗಳನ್ನು ಕಾಣಬಹುದು. ಒಂದು ಘಟನೆ ಹೀಗಿದೆ:

ಸರ್ ಥಾಮಸ್ ಅರ್ನಾಲ್ಡ್ ಬರೆಯುತ್ತಾರೆ: “ಅವರು ಮುಸ್ಲಿಮೇತರರಿಗೆ ನೀಡುವ ಸಂರಕ್ಷಣೆಗೆ ಪ್ರತಿಯಾಗಿ ವಸೂಲು ಮಾಡುವ ಜಿಝಿಯಾ ತೆರಿಗೆಯನ್ನು ಕಟ್ಟುವಂತೆ ಆದೇಶಿಸಿದರು. ಆದರೆ ಜಿಝಿಯಾ ನೀಡುವುದು ಅಪಮಾನವೆಂದು ಭಾವಿಸಿದ್ದ ತಗ್ಲಿಬ್ ಗೋತ್ರವು ಮುಸ್ಲಿಮರಂತೆ ಝಕಾತ್ ನೀಡುವ ಅಪೇಕ್ಷೆ ವ್ಯಕ್ತಪಡಿಸಿತು. ಖಲೀಫಾರು ಅದಕ್ಕೆ ಒಪ್ಪಿಗೆ ನೀಡಿ ಮುಸ್ಲಿಮೇತರರಂತೆಯೇ ಜಿಝಿಯಾಕ್ಕಿಂತ ದುಪ್ಪಟ್ಟು ಮೊತ್ತವವನ್ನು ಖಜಾನೆಗೆ ಸೇರಿಸಿದರು.

ಜಿಝಿಯಾವನ್ನು ಯಾವ ಕಾರಣಕ್ಕೂ ಹೆಚ್ಚಿಸಬಾರದೆಂದು ಪ್ರವಾದಿ (ﷺ) ಯವರು ಕಟ್ಟಪ್ಪಣೆ ಮಾಡಿದ್ದರು. ಒಪ್ಪಂದಕ್ಕೆ ಬದ್ಧರಾಗಿರುವವರನ್ನು ಉಪದ್ರವಿಸಿ, ಅವರಿಂದ ದುಬಾರಿ ತೆರಿಗೆ ವಸೂಲು ಮಾಡುವವರ ವಿರುದ್ಧ ನಾನು ಅಂತಿಮ ದಿನದಲ್ಲಿ ವಾದಿಸುತ್ತೇನೆ.”

ಇಸ್ಲಾಮೀ ರಾಷ್ಟ್ರದ ಬೇಡಿಕೆಯಂತೆ ಮುಸ್ಲಿಮ್ ಪ್ರಜೆಗಳು ಸೇವೆಗೆ ಸೇರುವುದು ಕಡ್ಡಾಯವಾಗಿದೆ. ಇದು ಅವರ ಧಾರ್ಮಿಕ ಕರ್ತವ್ಯವೂ ಆಗಿದೆ. ಒಂದು ಆದರ್ಶ ರಾಷ್ಟ್ರದ ಸಂರಕ್ಷಣೆಯನ್ನು ಆ ಆದರ್ಶವನ್ನು ಅಂಗೀಕರಿಸದವರ ಮೇಲೆ ಹೊರಿಸುವುದು ಸರಿಯಲ್ಲ. ಆದ್ದರಿಂದ ಇಸ್ಲಾಮೀ ರಾಷ್ಟ್ರವು ಮುಸ್ಲಿಮೇತರ ಪೌರರನ್ನು ಸೇನೆಯಲ್ಲಿ ಸೇರಲು ಒತ್ತಾಯಿಸುವುದಿಲ್ಲ. ಅದೇ ವೇಳೆ ಸ್ವಯಂ ಮುಂದೆ ಬರುವವರನ್ನು ಸೇನೆಯಲ್ಲಿ ಸೇರಿಸುತ್ತದೆ.

ಎಲ್ಲ ಪ್ರಜೆಗಳ ಸಂರಕ್ಷಣೆಯು ಇಸ್ಲಾಮೀ ರಾಷ್ಟ್ರದ ಹೊಣೆಗಾರಿಕೆಯಾಗಿದೆ. ಆದ್ದರಿಂದ ರಾಷ್ಟ್ರದ ಮುಸ್ಲಿಮೇತರರ ಸಂರಕ್ಷಣೆಗಾಗಿ ಮುಸ್ಲಿಮರು ಸೇನೆಯಲ್ಲಿ ಕಡ್ಡಾಯ ಸೇವೆ ಸಲ್ಲಿಸಬೇಕಾಗುತ್ತದೆ. ತನ್ನಿಮಿತ್ತ ಸಂರಕ್ಷಣೆಯ ಭದ್ರತೆ ಮತ್ತು ಸೇನಾ ಸೇವೆಯಿಂದ ವಿನಾಯಿತಿ ನೀಡಿರುವುದಕ್ಕೆ ಪ್ರತಿಯಾಗಿ ಅವರಿಂದ ಜಿಝಿಯಾ ಸಂಗ್ರಹಿಸಲಾಗುತ್ತದೆ. ಒಂದು ವೇಳೆ ಅವರ ಸಂರಕ್ಷಣೆ ಅಸಾಧ್ಯವಾದರೆ ಜಿಝಿಯಾವನ್ನು ಅವರಿಗೆ ಹಿಂತಿರುಗಿಸಲಾಗುತ್ತದೆ. ಹಾಗೆಯೇ ಸ್ವೇಚ್ಛೆಯಿಂದ ಸೇನೆ ಸೇರುವವರಿಗೂ ಜಿಝಿಯಾದಲ್ಲಿ ವಿನಾಯಿತಿ ನೀಡಲಾಗುತ್ತದೆ.

ಸರ್ ಥಾಮಸ್ ಆರ್ನಾಲ್ಡ್ ಹೀಗೆ ಬರೆದಿದ್ದಾರೆ: “ಕೆಲವರು ನಮ್ಮನ್ನು ನಂಬಿಸಲು ಪ್ರಯತ್ನಿಸುತ್ತಿರುವಂತೆ ಮುಸ್ಲಿಮ್ ಧರ್ಮವನ್ನು ಸ್ವೀಕರಿಸಲು ನಿರಾಕರಿಸಿದ್ದಕ್ಕಾಗಿ ಈ ತೆರಿಗೆಯನ್ನು ಕ್ರೈಸ್ತರ ಮೇಲೆ ಹೊರಿಸಿದ್ದಲ್ಲ. ಎಲ್ಲ ಮುಸ್ಲಿಮೇತರ ಪೌರರೂ ಅದನ್ನು ನೀಡಬೇಕಾಗಿತ್ತು. ಹಿರಾದ ನಿವಾಸಿಗಳು ಒಪ್ಪಂದದ ಹಣ ನೀಡಿದಾಗ, ಅದು ಅವರನ್ನು ಮುಸ್ಲಿಮ್ ಅಥವಾ ಮುಸ್ಲಿಮೇತರ ಮರ್ದಕರಿಂದ ಸಂರಕ್ಷಿಸುವುದಕ್ಕಾಗಿ ಎಂದು ತಿಳಿಸಲಾಗಿತ್ತು. ಹಿರಾದ ಪರಿಸರದ ಕೆಲವು ವರ್ಗಗಳೊಂದಿಗೆ ಒಪ್ಪಂದ ಮಾಡಿಕೊಂಡಾಗ ಖಾಲಿದ್ ಸ್ಪಷ್ಟಪಡಿಸಿದರು:

“ನಾವು ನಿಮ್ಮನ್ನು ಸಂರಕ್ಷಿಸಿದರೆ ನಾವು ಜಿಝಿಯಾದ ಹಕ್ಕುದಾರರಾಗುತ್ತೇವೆ. ನಾವು ಸಂರಕ್ಷಿಸದಿದ್ದರೆ ನಮಗೆ ಜಿಝಿಯಾ ಪಡೆಯುವ ಹಕ್ಕು ಇರುವುದಿಲ್ಲ. ”

ಖಲೀಫಾ ಉಮರ್(﵁) ರವರ ಕಾಲದಲ್ಲಿ ನಡೆದ ಒಂದು ಘಟನೆಯು, ಮುಸ್ಲಿಮರು ಇಂಥ ಒಪ್ಪಂದಗಳನ್ನು ಎಷ್ಟು ನಿಷ್ಠೆಯಿಂದ ಪಾಲಿಸುತ್ತಿದ್ದರೆಂದು ಸ್ಪಷ್ಟಪಡಿಸುತ್ತದೆ. ಹಿರಾಕ್ಲಿಯಸ್ ಚಕ್ರವರ್ತಿಯು ಮುಸ್ಲಿಮ್ ಸೇನೆಯನ್ನು ಹಿಂಜರಿಸಲಿಕ್ಕಾಗಿ ಒಂದು ಮಹಾ ಸೇನೆಯನ್ನು ಸಜ್ಜುಗೊಳಿಸಿದನು. ಆದ್ದರಿಂದ ಮುಸ್ಲಿಮರು ತಮ್ಮೆಲ್ಲ ಶಕ್ತಿಯನ್ನು ಆತನ ವಿರುದ್ಧ ಬಳಸಬೇಕಾಯಿತು. ತನ್ನಿಮಿತ್ತ ಅರಬ್ ಸೇನಾದಂಡನಾಯಕ ಅಬೂ ಉಬೈದಾರು ಸಿರಿಯನ್ ನಗರಗಳ ಮುಸ್ಲಿಮ್ ಸರದಾರರಿಗೆ ಅದಾಗಲೇ ಸಂಗ್ರಹಿಸಿರುವ ಜಿಝಿಯಾವನ್ನು ಸಂಪೂರ್ಣ ಮರಳಿಸಬೇಕೆಂದು ಆದೇಶಿಸಿದರು. ಮುಸ್ಲಿಮೇತರ ಪ್ರಜೆಗಳಿಗೆ ಹೀಗೆ ತಿಳಿಸಬೇಕೆಂದು ನಿರ್ದೇಶಿಸಿದರು.

“ನಿಮ್ಮಿಂದ ಸಂಗ್ರಹಿಸಿದ ಹಣವನ್ನು ನಿಮಗೆ ಹಿಂತಿರುಗಿಸುತ್ತಿದ್ದೇವೆ. ಒಂದು ಮಹಾ ಸೇನೆಯು ನಮ್ಮ ವಿರುದ್ಧ ದಂಡೆತ್ತಿ ಬರುತ್ತಿದೆಯೆಂಬ ಸುದ್ದಿ ಸಿಕ್ಕಿದೆ. ನಿಮ್ಮನ್ನು ನಾವು ಸಂರಕ್ಷಿಸುವೆವೆಂದು ನಾವು ಒಪ್ಪಂದ ಮಾಡಿದ್ದೆವು. ಆದರೆ ಈಗ ನಾವು ಅದಕ್ಕೆ ಅಶಕ್ತರಾಗಿದ್ದೇವೆ. ಆದ್ದರಿಂದ ನಿಮ್ಮಿಂದ ಪಡೆದ ಶುಲ್ಕವನ್ನು ಹಿಂತಿರುಗಿಸುತ್ತೇವೆ. ಒಂದು ವೇಳೆ ಯುದ್ಧದಲ್ಲಿ ಜಯಗಳಿಸಿದರೆ, ಪುನಃ ಒಪ್ಪಂದ ಊರ್ಜಿತಗೊಳಿಸುತ್ತೇವೆ.”

ಈ ಆಜ್ಞೆಯಂತೆ ಸಾರ್ವಜನಿಕ ಬೊಕ್ಕಸದಿಂದ ಹೇರಳ ಹಣ ವಿತರಣೆ ಮಾಡಲಾಯಿತು. ಕ್ರೈಸ್ತರು ಮುಸ್ಲಿಮರ ವಿಜಯಕ್ಕಾಗಿ ಪ್ರಾರ್ಥಿಸಿದರು.

"ದೇವನು ಪುನಃ ನಿಮಗೆ ನಮ್ಮನ್ನು ಆಳುವ ಸಾಮರ್ಥ್ಯವನ್ನು ನೀಡಲಿ. ನೀವು ರೋಮನ್ನರ ಮೇಲೆ ಜಯಗಳಿಸಿರಿ. ಅವರು ನಮ್ಮ ಹಣವನ್ನು ಖಂಡಿತ ಮರಳಿಸುತ್ತಿರಲಿಲ್ಲ. ಬದಲಾಗಿ ನಮ್ಮಿಂದಲೇ ಹಣ ಸುಲಿಯುತ್ತಿದ್ದರು."

ದೇಹದಾರ್ಢ್ಯವಿರುವ ಪುರುಷರಿಂದ ಜಿಝಿಯಾ ಸಂಗ್ರಹಿಸಲಾಗುತ್ತಿತ್ತೆಂದು ನಾವು ಅರಿತೆವು. ಸೇನೆಯಲ್ಲಿ ಸೇವೆ ಸಲ್ಲಿಸುವ ಬದಲಾಗಿ ಅದನ್ನು ಸಂಗ್ರಹಿಸಲಾಗುತ್ತಿತ್ತು. ಸೇನೆಯಲ್ಲಿರುವ ಮುಸ್ಲಿಮೇತರರಿಗೆ ಜಿಝಿಯಾದಿಂದ ವಿನಾಯಿತಿಯಿತ್ತು. ಅಂಟಾಕಿಯಾದ ಪರಿಸರದಲ್ಲಿ ವಾಸವಾಗಿದ್ದ ಜರ್ಜಮಾ ಪಂಗಡದವರು ಮುಸ್ಲಿಮರ ಕಡೆಯಿಂದ ಯುದ್ಧ ಮಾಡಲು ಒಪ್ಪಿದರು. ಜಿಝಿಯಾ ಹೊರಿಸಬಾರದು ಮತ್ತು ಸಮರಾರ್ಜಿತ ಸೊತ್ತಿನಲ್ಲಿ ಅವರಿಗೆ ಒಂದು ಪಾಲನ್ನು ನೀಡಬೇಕೆಂದು ಶರ್ತ ಹಾಕಿದ್ದರು.

ಹಿಜರಿ 22ರಲ್ಲಿ ಅರಬ್ ಸೇನೆಯು ಪರ್ಶಿಯಾದ ಉತ್ತರ ಭಾಗಕ್ಕೆ ತಲುಪಿದಾಗಲೂ ಅಲ್ಲಿನ ಒಂದು ಗೋತ್ರದೊಂದಿಗೆ ಈ ರೀತಿಯ ಒಪ್ಪಂದವಾಗಿತ್ತು. ಟರ್ಕಿ ಆಡಳಿತ ಕಾಲದಲ್ಲಿ ಸೇನೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಕ್ರೈಸ್ತರನ್ನು ಜಿಝಿಯಾದಿಂದ ಮುಕ್ತಗೊಳಿಸಲಾಗಿತ್ತು. ಅಲ್ಬೇನಿಯಾದ ಮೆಗಾರಿ ಕ್ರೈಸ್ತರು ಸಿಟ್ರೋನ್ ಮತ್ತು ಗರಾನಿಯಾ ಕಣಿವೆಗಳನ್ನು ಕಾಯಲು ಶಸ್ತ್ರಸಜ್ಜಿತ ತಂಡವನ್ನು ನೀಡಿದ್ದಕ್ಕಾಗಿ ಟರ್ಕಿಯರು ಅವರಿಗೆ ಜಿಝಿಯಾ ವಿನಾಯಿತಿಗೊಳಿಸಿದ್ದರು.

ಟರ್ಕಿ ಸೇನೆಯ ನಿರಾತಂಕ ಮುನ್ನಡೆಗಾಗಿ ಹಾದಿ ಮತ್ತು ಸೇತುವೆಗಳನ್ನು ಸರಿಪಡಿಸುತ್ತಿದ್ದ ಕ್ರೈಸ್ತ ತಂಡದಿಂದಲೂ ಜಿಝಿಯಾ ಪಡೆಯುತ್ತಿರಲಿಲ್ಲ. ಮಾತ್ರವಲ್ಲದೆ, ತೆರಿಗೆ ಪಡೆಯದೆ ಜಮೀನನ್ನು ಅವರಿಗೆ ಹಂಚಲಾಗುತ್ತಿತ್ತು. ಹೈಬ್ರದ ಕ್ರೈಸ್ತರು ಸುಲ್ತಾನರಿಗೆ ಜಿಝಿಯಾ ನೀಡುತ್ತಿರಲಿಲ್ಲ. ಅವರು 250 ನಾವಿಕರನ್ನು ತುರ್ತು ಪಡೆಗೆ ಒದಗಿಸಿದ್ದರು.

16 ಮತ್ತು 17ನೇ ಶತಮಾನಗಳಲ್ಲಿ ದಕ್ಷಿಣ ರುಮೇನಿಯಾದ ಆರ್ಮಟೋಮಿಯನ್ನರು ಟರ್ಕಿ ಸೇನೆಯ ಪ್ರಧಾನ ಘಟಕವಾಗಿದ್ದರು. ಸ್ಕುಟಾರಿಯದ ಉತ್ತರ ಪರ್ವತ ಪ್ರದೇಶಗಳಲ್ಲಿ ವಾಸವಾಗಿದ್ದ ಮಿರ್ದಿಗಳೆಂಬ ಅಲ್ಬೇನಿಯನ್ ಕೆಥೋಲಿಕ್ಕರಿಗೂ ತೆರಿಗೆಯನ್ನು ಮನ್ನಾ ಮಾಡಲಾಗಿತ್ತು. ಯುದ್ಧ ಸಂದರ್ಭಗಳಲ್ಲಿ ಸಶಸ್ತ್ರ ಯೋಧರನ್ನು ಒದಗಿಸುವುದಾಗಿ ಅವರು ಒಪ್ಪಿದ್ದರು. ಹಾಗೆಯೇ ಗ್ರೀಕ್ ಕ್ರೈಸ್ತರಿಗೂ ಜಿಝಿಯಾದಿಂದ ವಿನಾಯಿತಿಯಿತ್ತು. ಕಾನ್‌ಸ್ಟಂಟಿನೋಪಲ್‌ಗೆ ನೀರು ಸಾಗಿಸುತ್ತಿದ್ದ ಕೊಳವೆಗಳನ್ನು ಅವರು ಸಂರಕ್ಷಿಸುತ್ತಿದ್ದರು. ನಗರದ ಸಿಡಿಮದ್ದು ಸಂಗ್ರಹಾಲಯದ ಕಾವಲುಗಾರರಿಂದ ಜಿಝಿಯಾ ವಸೂಲು ಮಾಡುತ್ತಿರಲಿಲ್ಲ. ಆದರೆ ಈಜಿಪ್ಟ್‌ನ ಗ್ರಾಮೀಣ ಕೃಷಿಕರನ್ನು ಸೈನಿಕ ಸೇವೆಯಿಂದ ಮುಕ್ತಗೊಳಿಸಿದಾಗ ಅವರ ಮೇಲೆ ಕ್ರೈಸ್ತರಂತೆಯೇ ತೆರಿಗೆ ಹೇರಲಾಯಿತು.

ಪ್ರವಾದಿ(ﷺ)ಯವರು ಕಾಲದಲ್ಲಿ ಮದೀನದ ಮುಸ್ಲಿಮೇತರ ವರ್ಗಗಳು ರಾಷ್ಟ್ರದ ರಕ್ಷಣಾಕಾರ್ಯದಲ್ಲಿ ಸಹಕರಿಸುತ್ತಿದ್ದುದರಿಂದ ಅವರಿಂದ ಜಿಝಿಯಾ ಸಂಗ್ರಹಿಸಲಾಗುತ್ತಿರಲಿಲ್ಲ. ಅಂತೆಯೇ ಕೈರೋದಿಂದ ಕೆಂಪು ಸಮುದ್ರಕ್ಕೆ ಕಾಲುವೆ ತೋಡುವ ಪರಿಶೀಲನೆ ನಡೆಸಿದ ಮುಸ್ಲಿಮೇತರರಿಂದಲೂ ಖಲೀಫಾ ಉಮರ್ (ರ) ಜಿಝಿಯಾ ಸ್ವೀಕರಿಸಿರಲಿಲ್ಲ. ಸುಲ್ತಾನ್ ಸಲಾಹುದ್ದೀನರು ಸಿರಿಯಾದಿಂದ ಅನಿವಾರ್ಯವಾಗಿ ಹಿಂದೆ ಸರಿಯಬೇಕಾಗಿ ಬಂದಾಗ, ಆ ದೇಶವಾಸಿಗಳಿಂದ ಸಂಗ್ರಹಿಸಿದ್ದ ತೆರಿಗೆ ಹಣವನ್ನು ಅವರು ಮರಳಿಸಿದ್ದರು. ಈ ಐತಿಹಾಸಿಕ ಘಟನೆಗಳ ಆಧಾರದಲ್ಲಿ ಡಾ| ತಾರಾಚಂದ್ ಹೀಗೆ ಬರೆದಿದ್ದಾರೆ. "ಸಂರಕ್ಷಣೆಯ ಭರವಸೆ ನೀಡಲಾಗದ ಸಂದರ್ಭಗಳಲ್ಲಿ ಖಲೀಫರು ಈ ತೆರಿಗೆಯನ್ನು ಹಿಂತಿರುಗಿಸುತ್ತಿದ್ದರು."

ಸಂಕ್ಷಿಪ್ತದಲ್ಲಿ, ಜಿಝಿಯಾ ಎಂಬುದು ಧಾರ್ಮಿಕ ತೆರಿಗೆಯಾಗಿರಲಿಲ್ಲ. ಒಂದು ವೇಳೆ ಧಾರ್ಮಿಕ ತೆರಿಗೆಯಾಗಿರುತ್ತಿದ್ದರೆ ಸ್ತ್ರೀಯರು, ಮಕ್ಕಳು, ವೃದ್ಧರು ಮತ್ತು ಪುರೋಹಿತರನ್ನು ಅದರಿಂದ ಹೊರತುಪಡಿಸುತ್ತಿರಲಿಲ್ಲ. ಆರೋಗ್ಯ ಶಕ್ತಿ ಸಾಮರ್ಥ್ಯಗಳಲ್ಲಿ ಯೋಗ್ಯತೆಯಿದ್ದೂ ಸೇನೆಯಲ್ಲಿ ಸೇವೆ ಸಲ್ಲಿಸಲು ತಯಾರಿಲ್ಲದವರು ಆ ತೆರಿಗೆಯನ್ನು ನೀಡಬೇಕಾಗಿತ್ತು. ಸೈನಿಕ ಸೇವೆಯನ್ನು ಕಡ್ಡಾಯಗೊಳಿಸುವ ಪರಿಸ್ಥಿತಿಯಲ್ಲಿ ಜಿಝಿಯಾವನ್ನು ವಿನಾಯಿತಿಗೊಳಿಸಲಾಗುವುದು.

ವಸ್ತುತಃ ಅದು ದೈಹಿಕ ಮತ್ತು ಆರ್ಥಿಕ ಸಂರಕ್ಷಣೆಗೆ ನೀಡುವ ತೆರಿಗೆಯಾಗಿದೆ. ಆದರೆ, ಇಸ್ಲಾಮೀ ರಾಷ್ಟ್ರದ ಮುಸ್ಲಿಮ್ ಪ್ರಜೆಗಳು ಸೇನೆಯಲ್ಲಿ ಕಡ್ಡಾಯವಾಗಿ ಸೇವೆ ಸಲ್ಲಿಸಿದರೂ, ಸರಕಾರಕ್ಕೆ ಝಕಾತ್‌ನ ಅಂಶವನ್ನು ನೀಡಲೇಬೇಕು. ಝಕಾತ್‌ನ ಮೊತ್ತವು ಜಿಝಿಯಾಕ್ಕಿಂತ ಸದಾ ಅಧಿಕವಿರುತ್ತದೆಂಬುದು ಗಮನಾರ್ಹ. ಆದ್ದರಿಂದ ಇಸ್ಲಾಮೀ ರಾಷ್ಟ್ರದಲ್ಲಿ ಜಿಝಿಯಾ ನೀಡುವ ಮುಸ್ಲಿಮೇತರ ಪೌರರು ಮುಸ್ಲಿಮರಿಗಿಂತ ಹೆಚ್ಚು ಸೌಲಭ್ಯಗಳನ್ನು ಪಡೆಯುತ್ತಾರೆ.■

# ಅತ್ಯುತ್ತಮ ಗೆಳೆತನ

ಸಜ್ಜನರ ಒಡನಾಟವು ಪ್ರತಿಫಲ ಹಾಗೂ ಈಮಾನಿನ ವರ್ಧನೆಗೆ ಸಹಾಯಕವಾಗಿದೆ.

ಇಸ್ಲಾಮ್ ಮಾನವೀಯ ಸಂಬಂಧ ಮತ್ತು ಆದರ್ಶ ಸಂಬಂಧಕ್ಕೆ ಬಹಳ ಪ್ರಾಮುಖ್ಯತೆ ನೀಡುವ ಧರ್ಮವಾಗಿದೆ. ಒಬ್ಬ ಸತ್ಯವಿಶ್ವಾಸಿ ಮತ್ತೊಬ್ಬ ಸತ್ಯವಿಶ್ವಾಸಿಗೆ ಒಂದು ಕಟ್ಟಡದಂತೆ ಶಕ್ತಿ ತುಂಬುವವನಾಗಿದ್ದಾನೆಂದು ಪ್ರವಾದಿ(ﷺ) ಯವರು ಹೇಳಿರುವರು. ಈ ವಚನವು ಆದರ್ಶ ಸ್ನೇಹದ ಅನಿವಾರ್ಯತೆಯೆಡೆಗೆ ಬೊಟ್ಟು ಮಾಡುತ್ತದೆ.

ಲೌಕಿಕ ಹಿತಾಸಕ್ತಿಗಳಿಗಾಗಿ ರೂಪುಗೊಳ್ಳುವ ಮೈತ್ರಿ ಸೃಷ್ಟಿಕರ್ತನ ಸಂಪ್ರೀತಿಯನ್ನು ಬಯಸಿ ರೂಪುಗೊಳ್ಳುವ ಮೈತ್ರಿಯ ನಡುವೆ ಅಜಗಜಾಂತರ ವ್ಯತ್ಯಾಸವಿದೆ. ಇಹಲೋಕದ ಚಿಂತನೆಗಳಿಂದ ಮೈದಳಿಯುವ ಪ್ರೀತಿಯು ಪ್ರಕಟನೆ ಹಲವೊಮ್ಮೆ ಸ್ವಾರ್ಥದಿಂದ ತುಂಬಿರುತ್ತದೆ. ಬಹುತೇಕ ಸಂದರ್ಭಗಳಲ್ಲಿ ಅಂತಹ ಸಂಬಂಧಗಳ ಆಯುಷ್ಯ ಅತ್ಯಲ್ಪವಾಗಿರುತ್ತದೆ. ಆದರೆ ಅಲ್ಲಾಹನ ಮಾರ್ಗದಲ್ಲಿ ತನ್ನ ಸಹೋದರನನ್ನು ಪ್ರೀತಿಸುವವನು ತನ್ನ ಪ್ರಭುವಿನ ಸಂಪ್ರೀತಿಯನ್ನು ಗುರಿಯಾಗಿಟ್ಟುಕೊಂಡಿರುತ್ತಾನೆ. ಪ್ರಸ್ತುತ ಗುರಿಯ ಉದ್ದೇಶ ವಿಸ್ಮರಿಸಲ್ಪಡುವಾಗ ವೈರ, ವಿದ್ವೇಷ ಬೆಳೆದು ಅದು ಸಂಬಂಧಗಳ ಛಿದ್ರೀಕರಣಕ್ಕೆ ಕಾರಣವಾಗುತ್ತದೆ. ಸೌಹಾರ್ದದ ಆತ್ಯಂತಿಕ ಉದ್ದೇಶ ಸೃಷ್ಟಿಕರ್ತನ ಸಂಪ್ರೀತಿಯಾಗಿರುವಾಗ, ಒಬ್ಬನಿಗೆ ತನ್ನ ಸ್ನೇಹಿತನ ದುಃಖ–ದುಮ್ಮಾನ, ಕಷ್ಟ–ಕಾರ್ಪಣ್ಯಗಳಲ್ಲಿ ಪಾಲ್ಗೊಂಡು ತನ್ನಿಂದಾದ ಸಹಾಯ ಸಹಕಾರಗಳನ್ನು ನೀಡಲು ಸಾಧ್ಯವಾಗುತ್ತದೆ. ಇದು ನಮಗೆ ನಮ್ಮ ಸಜ್ಜನ ಪೂರ್ವಿಕರು ಕಲಿಸಿಕೊಟ್ಟ ಕ್ರಮವಾಗಿದೆ.

ಅತ್ಯಂತ ಸಂದಿಗ್ಧ ಘಟ್ಟದಲ್ಲಿಯೂ ತಮ್ಮ ಪ್ರಾಣವನ್ನು ಅಡವಿಟ್ಟು ಸಹೋದರರ ಬೇಡಿಕೆಗಳನ್ನು ಪೂರೈಸಿ ಪ್ರವಾದಿ(ﷺ) ಯವರ ಅನುಚರರ ಚರಿತ್ರೆ ನಮ್ಮನ್ನು ಯೋಚನೆಗೆ ಹಚ್ಚಬೇಕಾಗಿದೆ. ಮನೆ–ಮಾರು, ಕುಟುಂಬ, ಆಸ್ತಿಪಾಸ್ತಿಗಳನ್ನೆಲ್ಲ ತ್ಯಜಿಸಿ ಬರಿಗೈಯಲ್ಲಿ ಹಿಜಿರಾ ಹೋದವರಿಗೆ ಭವ್ಯ ಸ್ವಾಗತವನ್ನು ಕೋರಿ ತಮ್ಮಿಂದ ಸಾಧ್ಯವಾದ ಗರಿಷ್ಟ ಸಹಾಯ–ಸಹಕಾರಗಳನ್ನು ಒದಗಿಸಿದ ಮದೀನಾದ ಸತ್ಯವಿಶ್ವಾಸಿಗಳ ಚರಿತ್ರೆ ಇಲ್ಲಿ ಸ್ಮರಣೀಯ. ಅಂತಹ ಒಂದು ಘಟನೆ ಜಾಗತಿಕ ಇತಿಹಾಸದಲ್ಲಿ ಎಲ್ಲಿಯೂ ಘಟಿಸಿಲ್ಲ. ಆ ಮಾದರಿ ಸಮುದಾಯವು ಇಸ್ಲಾಮ್ ಪ್ರಸ್ತುತಪಡಿಸುವ ಆದರ್ಶ ಸಂಬಂಧದ ಮಾಧುರ್ಯವನ್ನು ಆಸ್ವದಿಸಿತು.

ಹದಗೆಡುತ್ತಿರುವ ವೈಯುಕ್ತಿಕ ಸಂಬಂಧಗಳು, ದುರಂತಗಳಾಗಿ ಮಾರ್ಪಡುತ್ತಿರುವ ಮಾನಸಿಕ ಭಿನ್ನಾಭಿಪ್ರಾಯಗಳು, ವೈರ–ವಿದ್ವೇಷದೆಡೆಗೆ ಕೊಂಡೊಯ್ಯುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

ಮೈತ್ರಿಯು ನಮ್ಮ ಜೀವನದಲ್ಲಿ ಹೇಗೆ ಸಕರಾತ್ಮಕ ಮತ್ತು ನಕರಾತ್ಮಕವಾಗಿ ಪ್ರಭಾವಿಸುತ್ತದೆಯೆಂದು ಪ್ರವಾದಿ(ﷺ) ಯವರು ಒಂದು ಉಪಮೆ ಮೂಲಕ ನಮಗೆ ವಿವರಿಸಿಕೊಟ್ಟಿದ್ದಾರೆ. ಒಳಿತನ್ನು ನೀಡುವ, ಒಳಿತನ್ನು ಮಾತ್ರ ಯೋಚಿಸುವ ಹಾಗೂ ಯೋಚಿಸುವಂತೆ ಮಾಡುವವನೇ ಉತ್ತಮ ಗೆಳೆಯ. ಉತ್ತಮ ಮಿತ್ರನನ್ನು ಪ್ರವಾದಿ (ﷺ) ಯವರು ಕಸ್ತೂರಿ ಮಾರಾಟಗಾರನಿಗೆ ಹೋಲಿಸಿದ್ದಾರೆ. ಅವನ ಜೊತೆಯಲ್ಲಿದ್ದರೆ ಪರಮಳ ಲಭಿಸುತ್ತದೆ. ಆದರೆ ಕೆಟ್ಟ ಸ್ನೇಹಿತನನ್ನು ಪ್ರವಾದಿ(ﷺ) ಯವರು ಅಕ್ಕಸಾಲಿಗನಿಗೆ ಹೋಲಿಸಿದ್ದಾರೆ. ಅವನ ಬಳಿ ನಿಂತರೆ ಹೊಗೆ ಮತ್ತು ಬೂದಿಯಲ್ಲದೆ ಬೇರೇನೂ ಸಿಗುವುದಿಲ್ಲ. ಕೆಲವೊಮ್ಮೆ ಬೆಂಕಿಯ ಕಿಡಿ ಹಾರಿ ವಸ್ತ್ರ ತೂತು ಬೀಳುವ ಸಾಧ್ಯತೆಯೂ ಇದೆ. ಕಸ್ತೂರಿ ಮಾರಾಟಗಾರನಿಗೆ ಹಣ

ನೀಡದಿದ್ದರೂ ಪರಿಮಳವನ್ನು ಆಸ್ವದಿಸಲು ಸಾಧ್ಯವಾಗುತ್ತದೆ.

ಒಡನಾಟ ಮತ್ತು ಗೆಳೆತನದಲ್ಲಿ ಜಾಗರೂಕತೆ ಪಾಲಿಸಬೇಕೆನ್ನುವುದು ವ್ಯಕ್ತವಿದೆ. ಉತ್ತಮ ಸಂಬಂಧಗಳಿಗೆ ಇಹಪರಗಳಲ್ಲಿ ಒಳಿತಿನ ಕೊಯ್ಲು ಮಾಡಬಹುದು. ಸಜ್ಜನರ ಒಡನಾಟವು ಪ್ರತಿಫಲ ಹಾಗೂ ಈಮಾನಿನ ವರ್ಧನೆಗೆ ಸಹಾಯಕವಾಗಿದೆ. ಆದರೆ ದುಷ್ಟರ ಸಹವಾಸದಿಂದ ಇತರರ ನಡುವೆ ನಾವು ಕೂಡಾ ಅಂತಹವರೇ ಎಂಬಂತಹ ತಪ್ಪುಕಲ್ಪನೆ ಮೂಡಲು ಕಾರಣವಾಗಬಹುದು. ಅಂತಹವರ ಸಹವಾಸದಿಂದ ನಮ್ಮ ಸ್ವಭಾವಗುಣಗಳೂ ಕೆಟ್ಟು ಹೋಗಿ ಈಮಾನಿನಲ್ಲಿ ಕೊರತೆ ಸಂಭವಿಸುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ಆದುದರಿಂದಲೇ ಪ್ರವಾದಿ(ﷺ) ಯವರು ಒಬ್ಬ ವ್ಯಕ್ತಿ ಎಂತಹವನೆಂದು ತೀರ್ಮಾನಿಸಲು ಅಳತೆಗೋಲಾಗಿ ಅವನ ಮಿತ್ರನನ್ನು ಪರಿಶೋಧಿಸಬೇಕೆಂದು ಹೇಳಿರುವರು.

ಒಳಿತನ್ನು ಮೈಗೂಡಿಸಿಕೊಂಡು ಸೃಷ್ಟಿಕರ್ತನನ್ನು ಸ್ಮರಿಸುವ ಮತ್ತು ಒಳಿತನ್ನು ಆಜ್ಞಾಪಿಸಿ ಕೆಡುಕನ್ನು ತಡೆಯುವ ಮಿತ್ರನು ಲಭಿಸುವುದು ದೊಡ್ಡ ಭಾಗ್ಯವಾಗಿದೆ. ನಾವು ಅಂತಹವರನ್ನು ಆರಿಸಿ ಅವರ ಗೆಳೆತನವನ್ನು ಸಂಪಾದಿಸಿಕೊಳ್ಳಬೇಕು. ನಮ್ಮ ಉಪಸ್ಥಿತಿ ಮತ್ತು ಅನುಪಸ್ಥಿತಿಯಲ್ಲಿ ನಮ್ಮನ್ನು ನೆನಪಿಸಿಕೊಂಡು ನಮಗಾಗಿ ಪ್ರಾರ್ಥಿಸುವ ಹಾಗೂ ನಮ್ಮ ಸಂಕಷ್ಟಗಳ ಸಮಯದಲ್ಲಿ ಸಹಾಯಕನಾಗಿ ನಿಲ್ಲುವ, ನಾವು ಬಾಯಿಬಿಟ್ಟು ಹೇಳದಿದ್ದರೂ ಇಂಗಿತವನ್ನು ಅರಿತುಕೊಂಡು ಸ್ಪಂದಿಸುವ ಗೆಳೆಯ ನಮಗೆ ಲಭಿಸಿದರೆ ನಾವು ಕೂಡಾ ಅಂತಹವರಾಗಿ ಮಾರ್ಪಡುತ್ತೇವೆ.

ಕಾಯಿಲೆ ಪೀಡಿತನಾದಾಗ ಶುಶ್ರೂಷೆ ಮಾಡುವ, ಆಸ್ಪತ್ರೆಯಲ್ಲಿ ತನಗಾಗಿ ತ್ಯಾಗವನ್ನು ಸಹಿಸುವ, ಮರಣಾಸನ್ನ ವೇಳೆಯಲ್ಲಿ ತನ್ನ ತಲೆಭಾಗದಲ್ಲಿ ಕೂತು ಕಲಿಮ ಹೇಳಿಕೊಡುವ, ತನ್ನ ಮರಣಾನಂತರ ಸ್ನಾನ ಮಾಡಿಸಿ ಕಫನ್ ಹೊದಿಯುವ, ಕಬ್ರ್‌ನ ಬಳಿಯಿಂದ ಸಂಬಂಧಿಕರು ತೆರಳಿದರೂ ನೆನೆದ ಕಣ್ಣುಗಳೊಂದಿಗೆ ಅಲ್ಲಿ ನಿಂತು ತಸ್ಬೀತ್ ಹೇಳುವ ಗೆಳೆಯ... ಅವರೇ ಆದರ್ಶ ಸಂಬಂಧಿಕರು. ನಾವು ಅವರನ್ನು ಮತ್ತು ಅವರು ನಮ್ಮನ್ನು ಪ್ರೀತಿಸುವುದು ಕೇವಲ ಅಲ್ಲಾಹನ ಸಂಪ್ರೀತಿಗೆ ಮಾತ್ರ.

ಹೀಗಾದರೆ ನಾವು ಅಲ್ಲಾಹನ ಮೆಚ್ಚುಗೆಗೆ ಪಾತ್ರರಾಗುತ್ತೇವೆ. ಪರಲೋಕದಲ್ಲಿ ಅಲ್ಲಾಹನ ನೆರಳು ನಮಗೆ ಲಭ್ಯವಾಗುವುದು. ನಿಷ್ಕಳಂಕ ಗೆಳೆತನದ ಪ್ರತಿಫಲ ಉನ್ನತ ಸ್ವರ್ಗವಾಗಿದೆ. ನಾವು ಇದಕ್ಕಾಗಿರುವ ಎಲ್ಲಾ ಮಾರ್ಗಗಳನ್ನು ಸ್ವೀಕರಿಸುವುದರ ಜೊತೆಗೆ ಹಗೆ, ವಿದ್ವೇಷವನ್ನು ಬೆಳೆಸುವ ಕಾರ್ಯದಿಂದ ದೂರವಿರಬೇಕು.

ಅಲ್ಲಾಹನ ಮಾರ್ಗದಲ್ಲಿ ಪ್ರೀತಿಸಿ ಒಟ್ಟಾಗಿರುವ ಇಬ್ಬರ ನಡುವೆ ಹುಳಿ ಹಿಂಡುವುದು ಮಹಾ ಪಾತಕವಾಗಿದೆ. ಪರನಿಂದೆ, ಮೋಸ, ಚಾಡಿ ಸಂಬಂಧಗಳನ್ನು ಹದಗೆಡಿಸುವ ದುಷ್ಟ ಪ್ರವೃತ್ತಿಗಳಾಗಿವೆ. ಅವುಗಳಿಂದ ದೂರವಿರಬೇಕೆಂದು ಪ್ರವಾದಿ(ﷺ) ಯವರು ಕಲಿಸಿಕೊಟ್ಟಿದ್ದಾರೆ.

ಪರಸ್ಪರ ಮನಬಿಚ್ಚಿ ಮಾತನಾಡದಿರುವುದು ಸಂಬಂಧಗಳು ಬಿರುಕು ಬಿಡುವ ಮತ್ತೊಂದು ಕಾರ್ಯವಾಗಿದೆ. ಮನಸ್ಸಿನಲ್ಲಿರುವುದನ್ನು ಬಹಿರಂಗಪಡಿಸದೆ ತೇಪೆ ಸಾರಿಸುವುದರಿಂದ ಸಂಬಂಧಗಳು ಹದಗೆಡುತ್ತವೆ. ಪರಸ್ಪರ ಮಾತುಕತೆಗಳ ಮೂಲಕ ವಿಚಾರ–ವಿನಿಮಯ ನಡೆಸುವುದು ಉತ್ತಮ ಬಾಂಧವ್ಯಕ್ಕೆ ಪ್ರೇರಕವಾಗುವ ಅಂಶವಾಗಿದೆ. ■

*20 ನೇ ಪುಟದಿಂದ*

## ವಿಲಾಯತ್, ಕರಾಮತ್, ಗೈಬ್—ಒಂದು ಅಧ್ಯಯನ

ಕೋಣೆಯಲ್ಲಿ ಏನು ನಡೆಯುತ್ತದೆ ಎಂದು ಗೋಡೆಯ ತಡೆಯಿಂದಾಗಿ ಸಾಮಾನ್ಯ ನೆಲೆಯಲ್ಲಿ ಒಬ್ಬರಿಗೆ ತಿಳಿಯಲು ಸಾಧ್ಯವಾಗದು. ಅದು ಸಾಪೇಕ್ಷ ಗೈಬ್ ಆಗಿದೆ. ಆ ಕೋಣೆಯಲ್ಲಿ ಒಂದು ಕಣ್ಗಾವಲು ಕ್ಯಾಮರ ಇದ್ದರೆ ಅಲ್ಲಿ ಏನು ನಡೆಯುತ್ತದೆಯೆಂದು ಅವರಿಗೆ ಸ್ಕ್ರೀನ್ ಮೂಲಕ ನೋಡಲು ಸಾಧ್ಯವಿದೆ. ಸಾಮಾನ್ಯ ಅರ್ಥದಲ್ಲಿ ಒಬ್ಬರು ಅರಿಯದಿರುವುದನ್ನು ಮತ್ತೊಬ್ಬರು ಅರಿಯುತ್ತಾರೆಂದು ಹೇಳುವುದರಲ್ಲಿ ತಪ್ಪಿಲ್ಲ. ಆದರೆ ಸೂಫಿಗಳು ವಾದಿಸುವುದು ಮತ್ತು ಪ್ರಚುರಪಡಿಸುತ್ತಿರುವುದು ಈ ಅರ್ಥದಲ್ಲಲ್ಲ. ಅವರ ಗ್ರಂಥಗಳನ್ನು ಓದಿದರೆ ಇದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಅಹ್ಲುಸ್ಸುನ್ನದ ವಿದ್ವಾಂಸರು ಈ ವಿಷಯಗಳನ್ನು ಜನರಿಗೆ ಕಲಿಸಲು ಮುಂದೆ ಬರಬೇಕಾಯಿತು.

ಇದ್ಯಾವುದನ್ನೂ ತಿಳಿಯದೆ ಕೆಲವರು ಕರಾಮತ್‌ನ ಮರೆಯಲ್ಲಿ ಪ್ರತಿಯೊಂದು ಅದೃಶ್ಯ ಕಾರ್ಯವನ್ನು ಸದಾಕಾಲ ಅರಿಯಲು ಸಾಧ್ಯವಿದೆಯೆಂದು ವಾದಿಸುತ್ತಾರೆ. ಒಬ್ಬನು ತನಗೆ ಗೈಬ್‌ನ ಜ್ಞಾನವಿದೆಯೆಂದು ಹೇಳಿದರೆ ಅವನು ಕಾಫಿರನಾಗುತ್ತಾನೆ. ಇಬ್ನ್ ಅಬ್ದುಲ್ ವಹ್ಹಾಬ್(ﷺ) ಕುಫ್ರ್‌ನ ಐದು ವಿಭಾಗಗಳನ್ನು ಹೆಸರಿಸಿದ್ದಾರೆ. ಅದರಲ್ಲಿ ಒಂದು ಗೈಬ್ ಅರಿಯುತ್ತೇನೆ ಎಂದು ವಾದಿಸುವವರಾಗಿದ್ದಾರೆ. ಹೆಚ್ಚು ತಿಳಿದವನು ಅಲ್ಲಾಹನಾಗಿದ್ದಾನೆ. ■

# ಅಲ್ಲಾಹನು ಮೊತ್ತಮೊದಲು ಸೃಷ್ಟಿಸಿದ್ದೇನು?

**ಪ್ರಶ್ನೆ :** ಅಲ್ಲಾಹನು ಮೊತ್ತಮೊದಲು ಲೇಖನಿಯನ್ನು ಸೃಷ್ಟಿಸಿದನೆಂದೂ, ಮತ್ತೊಂದು ಹದೀಸ್‌ನಲ್ಲಿ ಬುದ್ಧಿಯನ್ನು ಮೊದಲು ಸೃಷ್ಟಿಸಿದನೆಂದೂ ಕಂಡುಬರುತ್ತದೆ. ಇನ್ನು ಕೆಲವರು ಅವನು ಆರಂಭದಲ್ಲಿ ಪ್ರವಾದಿ ಮುಹಮ್ಮದ್(ﷺ) ರ ಪ್ರಕಾಶವನ್ನು ಸೃಷ್ಟಿಸಿದನೆಂದು ಹೇಳುತ್ತಾರೆ. ಅಲ್ಲಾಹನು ಮೊದಲು ಯಾವುದನ್ನು ಸೃಷ್ಟಿಸಿದ?

**ಉತ್ತರ :** "ಅಲ್ಲಾಹು ಸಕಲ ವಸ್ತುಗಳ ಸೃಷ್ಟಿಕರ್ತನು" (39:62) ಎಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿದೆ. ಇದರ ಪ್ರಕಾರ ಅಲ್ಲಾಹನನ್ನು ಹೊರತುಪಡಿಸಿ ಉಳಿದವುಗಳೆಲ್ಲವೂ ಸೃಷ್ಟಿಗಳಾಗಿವೆ. ಇದರಲ್ಲಿ ಮನುಷ್ಯನು ಪಂಚೇಂದ್ರಿಯಗಳಿಗೆ ಗೋಚರವಾದದ್ದು ಮತ್ತು ಅಗೋಚರವಾದ ವಸ್ತುಗಳಿವೆ. ಆಕಾಶಕಾಯಗಳು ಮತ್ತು ಭೂಮಿ ದೃಶ್ಯ ಪ್ರಪಂಚದ ಭಾಗವಾಗಿದೆ. ಅವುಗಳ ಸೃಷ್ಟಿಯ ಕುರಿತು ಕುರ್‌ಆನಿನ ಒಂದು ಸೂಕ್ತದಲ್ಲಿ ಹೀಗಿದೆ.

﴿ وَهُوَ ٱلَّذِى خَلَقَ ٱلسَّمَـٰوَٰتِ وَٱلْأَرْضَ فِى سِتَّةِ
أَيَّامٍ وَكَانَ عَرْشُهُۥ عَلَى ٱلْمَآءِ ﴾

"ಭೂಮಿ ಮತ್ತು ಆಕಾಶಗಳನ್ನು ಆರು ದಿನಗಳಲ್ಲಿ ಸೃಷ್ಟಿಸಿದವನು ಅವನೇ. ಅದಕ್ಕಿಂತ ಮುಂಚೆ ಅವನ ಅರ್ಶ್ ನೀರಿನ ಮೇಲಿತ್ತು." (11:7)

ಈ ಸೂಕ್ತ ಮತ್ತು ಪ್ರವಾದಿ(ﷺ) ಯವರ ಕೆಲವು ವಚನಗಳಿಂದ ಆಕಾಶ ಮತ್ತು ಭೂಮಿಯನ್ನು ಸೃಷ್ಟಿಸುವುದಕ್ಕಿಂತ ಮೊದಲು ಅಲ್ಲಾಹನ ಅರ್ಶ್ ಅಸ್ತಿತ್ವದಲ್ಲಿತ್ತೆಂದು ಗ್ರಹಿಸಬಹುದಾಗಿದೆ.

ಅರ್ಶ್ ಎಂದರೇನು? ಅದರ ಸ್ವರೂಪ ಹೇಗಿದೆ? ಪವಿತ್ರ ಕುರ್‌ಆನಿನಲ್ಲಾಗಲಿ ಹದೀಸ್‌ನಲ್ಲಾಗಲಿ ಇದಕ್ಕೆ ಸ್ಪಷ್ಟವಾದ ಉತ್ತರ ಲಭಿಸುವುದಿಲ್ಲ. ಅರಸರು ಮತ್ತು ಚಕ್ರವರ್ತಿಗಳು ಆಸೀನರಾಗುವ ಅಥವಾ ಅವರ ಅಧಿಕಾರಪೀಠವನ್ನು ಗುರುತಿಸುವ ಕನ್ನಡದ ಸಿಂಹಾಸನ ಎಂಬ ಪದವನ್ನು ಕೆಲವರು ಅರ್ಶ್‌ಗೆ ಅನುವಾದವಾಗಿ ನೀಡುತ್ತಾರೆ. ಇದು ತಪ್ಪು. ಅರ್ಶ್‌ನ ಕುರಿತು ಹದೀಸ್‌ನಲ್ಲಿ ಯಾವುದೇ ವಿವರಣೆಗಳಿಲ್ಲದಿರುವುದರಿಂದ ಈ ಪದವನ್ನು ಭಾಷೆಗಳ ಇತರ ಪದಗಳೊಂದಿಗೆ (ಉದಾ: ಸಿಂಹಾಸನ, ಅಧಿಕಾರಪೀಠ) ಹೋಲಿಸಿ ಉಪಮೆಯಾಗಿ ಅಥವಾ ಸಾದೃಶ್ಯವಾಗಿ ವಿವರಿಸುವುದಕ್ಕೆ ಅವಕಾಶವಿಲ್ಲ. ಅರ್ಶ್ ಗೋಚರಪ್ರಪಂಚದ ಭಾಗವಲ್ಲವೆಂದು ಪವಿತ್ರ ಕುರ್‌ಆನ್ ಸೂಚಿಸಿದೆ.

ಇಮ್ರಾನ್ ಬಿನ್ ಹುಸೈನ್(ರ) ಅವರಿಂದ ಬುಖಾರಿ ವರದಿ ಮಾಡಿದ ಒಂದು ಹದೀಸಿನಲ್ಲಿ ಹೀಗಿದೆ.

"ಯಮನ್‌ನ ನಿವಾಸಿಗಳು ಪ್ರವಾದಿ(ﷺ) ಯವರ ಬಳಿಗೆ ಧಾರ್ಮಿಕ ಕಾರ್ಯಗಳನ್ನು ತಿಳಿಯಲು ಆಗಮಿಸಿದರು. ಅವರು ಪ್ರವಾದಿ(ﷺ) ಯವರೊಂದಿಗೆ ಸೃಷ್ಟಿಯ ಆರಂಭದ ಕುರಿತು ಕೇಳಿದಾಗ ಅವರು ಹೀಗೆಂದರು: ಅಲ್ಲಾಹನು ಅಸ್ತಿತ್ವದಲ್ಲಿದ್ದ. ಅವನಿಗಿಂತ ಮೊದಲು ಮತ್ತು ಅವನ ಜೊತೆಯಲ್ಲಿ ಅವನಲ್ಲದೆ ಬೇರೆ ಯಾವುದೂ ಇರಲಿಲ್ಲ. ಅವನ ಅರ್ಶ್ ನೀರಿನ ಮೇಲಿತ್ತು. ಅವನು ಎಲ್ಲಾ ಕಾರ್ಯಗಳನ್ನೂ ದಿಕ್ರ್‌ನಲ್ಲಿ ಬರೆದಿಟ್ಟ. ಅವನು ಆಕಾಶಗಳು ಮತ್ತು ಭೂಮಿಯನ್ನು ಸೃಷ್ಟಿಸಿದ."

ಈ ಹದೀಸಿನ ದೃಶ್ಯಪ್ರಪಂಚಕ್ಕಿಂತ ಮೊದಲು ಅರ್ಶ್ ಅಸ್ತಿತ್ವದಲ್ಲಿತ್ತೆಂದು ಸೂಚಿಸುತ್ತದೆ. ಇದರ ಆಧಾರದಲ್ಲಿ ಹಲವು ವಿದ್ವಾಂಸರು

ಅಲ್ಲಾಹನು ಸೃಷ್ಟಿಸಿದ ಮೊದಲ ವಸ್ತು ಅರ್ಶ್ ಎಂದು ಅಭಿಪ್ರಾಯಪಡುತ್ತಾರೆ. ಆದರೆ ಕುರ್‌ಆನ್ ಮತ್ತು ಹದೀಸಿನಲ್ಲಿ ಅರ್ಶ್ ನೀರಿನ ಮೇಲಿತ್ತೆಂದು ಸ್ಪಷ್ಟಪಡಿಸಿರುವುದರಿಂದ ಮೊತ್ತಮೊದಲು ಅಲ್ಲಾಹನು ನೀರನ್ನು ಸೃಷ್ಟಿಸಿದ ಎನ್ನುವುದು ಇನ್ನ ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಅರ್ಶ್ ಮತ್ತು ನೀರು ಏಕಕಾಲದಲ್ಲಿ ಸೃಷ್ಟಿಸಲ್ಪಟ್ಟಿರುವ ಸಾಧ್ಯತೆಯೂ ಇದೆ.

ಆಕಾಶ ಭೂಮಿಯ ಮೊದಲು ಅಲ್ಲಾಹನು ಸೃಷ್ಟಿಸಿದ ಜಲವು ದೃಶ್ಯ ಪ್ರಪಂಚದ ಭಾಗವಾದ, ನಮಗೆ ಪರಿಚಿತವಾಗಿರುವ ಜಲವಾಗಿರುವ ಸಾಧ್ಯತೆ ಇಲ್ಲ. ನೆಲೆಗೊಳ್ಳಲು ಪಾತ್ರೆಯ ಅಥವಾ ಸ್ಥಳದ ಅಗತ್ಯವಿಲ್ಲದ ಅನಿಲರೂಪದ ಒಂದು ರೀತಿಯ ವಿಶೇಷ ಜಲವಾಗಿರುವ ಸಾಧ್ಯತೆ ಇದೆ. ಅಲ್ಲಾಹನು ಮೊದಲು ಸೃಷ್ಟಿಸಿದ್ದು ಲೇಖನಿಯಾಗಿದೆಯೆಂದೂ ಅದರೊಂದಿಗೆ ಬರೆಯು ಎಂದು ಆದೇಶಿಸಿದಾಗ ಅದು ಪುನರುತ್ಥಾನ ದಿನದ ತನಕ ಜರಗುವ ಕಾರ್ಯಗಳೆಲ್ಲವನ್ನೂ ಬರೆದಿಟ್ಟಿತೆಂದೂ ಪ್ರವಾದಿ(ﷺ) ಯವರು ಹೇಳಿರುವುದಾಗಿ ಅಹ್ಮದ್, ತಿರ್ಮಿದಿ, ಅಬೂದಾವೂದ್ ಮೊದಲಾದವರು ಉಬಾದತ್ ಬಿನ್ ಸಾಮಿತ್(ؓ) ಅವರಿಂದ ವರದಿ ಮಾಡಿದ್ದಾರೆ. ಆದರೆ ಈ ಹದೀಸ್ ಅರ್ಶ್‌ಗಿಂತ ಮೊದಲು ಲೇಖನಿ ಸೃಷ್ಟಿಸಲ್ಪಟ್ಟಿತು ಎನ್ನುವುದಕ್ಕೆ ಪ್ರಬಲವಾದ ಪುರಾವೆಯಿಲ್ಲ. ಮೊದಲು ವಿವರಿಸಿದ ಬುಖಾರಿಯವರ ಹದೀಸಿನ ಪ್ರಕಾರ ಲೇಖನಿಯ ಸೃಷ್ಟಿ ಮತ್ತು ಅದರ ಮೂಲಕ ಸಕಲ ಕಾರ್ಯಗಳನ್ನು ಲಿಖಿತಗೊಂಡದ್ದು ಅರ್ಶ್‌ನ ಸೃಷ್ಟಿಯ ನಂತರವಾಗಿರುವ ಸಾಧ್ಯತೆ ಹೆಚ್ಚಾಗಿದೆ. ಇನ್ನು ಮೊದಲು ಬುದ್ಧಿ ಅಥವಾ ಪ್ರವಾದಿ(ﷺ) ಯವರ ಪ್ರಕಾಶ ಸೃಷ್ಟಿಸಲ್ಪಟ್ಟಿತು ಎನ್ನುವುದಕ್ಕೆ ಯಾವುದೇ ಪ್ರಬಲ ಆಧಾರಗಳಿಲ್ಲ.

**ಪ್ರಶ್ನೆ :** ಸುಗಮ ಹೆರಿಗೆ ನಡೆದಾಗ ರೋಗಶಮನವಾದಾಗ ಅಥವಾ ಏನಾದರೂ ಸಂಕಷ್ಟಗಳು ನಿವಾರಣೆಯಾದರೆ ಯತೀಂಖಾನಗಳಿಗೆ ಹಣ ಇಲ್ಲವೇ ಆಹಾರವಸ್ತುಗಳನ್ನು ದಾನ ಮಾಡುವುದಿದೆ. ಕೆಲವೊಮ್ಮೆ ಅಲ್ಲಿರುವ ಮಕ್ಕಳೊಂದಿಗೆ ಒಳಿತಿಗಾಗಿ ಸಾಮೂಹಿಕವಾಗಿ ಪ್ರಾರ್ಥನೆ ನಡೆಸಲಾಗುತ್ತಿದೆ. ಇದು ಸರಿಯೇ?

**ಉತ್ತರ :** ಅಲ್ಲಾಹನ ಅನುಗ್ರಹ ಲಭಿಸುವಾಗ ಕೃತಜ್ಞತೆ ಪ್ರಕಟಿಸಲು ಐಚ್ಛಿಕ (ಕಡ್ಡಾಯವಲ್ಲದ) ಪುಣ್ಯಕರ್ಮಗಳನ್ನು ನಿರ್ವಹಿಸುವುದಕ್ಕೆ ಕುರ್‌ಆನ್ ಮತ್ತು ಸುನ್ನತ್ತಿನಲ್ಲಿ ಆಧಾರವಿದೆ. ಪ್ರವಾದಿ ಸುಲೈಮಾನರ (ؑ) ಮಾತನ್ನು ಪವಿತ್ರ ಕುರ್‌ಆನ್ ಹೀಗೆ ಉಲ್ಲೇಖಿಸಿದೆ.

قَالَ هَٰذَا مِن فَضْلِ رَبِّي لِيَبْلُوَنِي أَأَشْكُرُ
أَمْ أَكْفُرُ ۖ وَمَن شَكَرَ فَإِنَّمَا يَشْكُرُ لِنَفْسِهِ ۖ
وَمَن كَفَرَ فَإِنَّ رَبِّي غَنِيٌّ كَرِيمٌ ﴿٤٠﴾

"ನಾನು ಕೃತಜ್ಞತೆ ತೋರುತ್ತೇನೋ, ಕೃತಘ್ನನಾಗಿ ಬಿಡುತ್ತೇನೋ ಎಂದು ನನ್ನನ್ನು ಪರೀಕ್ಷಿಸುವುದಕ್ಕಾಗಿ ಇದು ನನ್ನ ಪ್ರಭುವಿನ ಅನುಗ್ರಹವಾಗಿದೆ. ಕೃತಜ್ಞತೆ ತೋರುವವನ ಕೃತಜ್ಞತೆಯು ಅವನಿಗೇ ಲಾಭದಾಯಕವಾಗಿದೆ. ಯಾರಾದರೂ ಕೃತಘ್ನತೆ ತೋರಿದರೆ ನನ್ನ ಪ್ರಭು ನಿರಪೇಕ್ಷನೂ ಸ್ವಯಂ ಸನ್ಮಾನ್ಯನೂ ಆಗಿರುತ್ತಾನೆ." (27:40)

وَإِذْ تَأَذَّنَ رَبُّكُمْ لَئِن
شَكَرْتُمْ لَأَزِيدَنَّكُمْ ۖ وَلَئِن
كَفَرْتُمْ إِنَّ عَذَابِي لَشَدِيدٌ ﴿٧﴾

"ನೀವು ಕೃತಜ್ಞರಾಗಿದ್ದರೆ ನಾನು ನಿಮಗೆ ಇನ್ನೂ ಹೆಚ್ಚು ಪ್ರದಾನ ಮಾಡುವೆನೆಂದು ನೀವು ಕೃತಘ್ನತೆ ತೋರಿದರೆ ನನ್ನ ಶಿಕ್ಷೆಯು ಅತ್ಯಂತ ಕಠಿಣವಾಗಿದೆಯೆಂದು ನಿಮ್ಮ ಪ್ರಭು ಎಚ್ಚರಿಕೆ ಕೊಟ್ಟಿರುವುದನ್ನು ಸ್ಮರಿಸಿರಿ." (14:7)

ಐಚ್ಛಿಕವಾದ ಪುಣ್ಯಕರ್ಮಗಳನ್ನು ಮಾಡುತ್ತೇನೆಂದು ಶಪಥ ಮಾಡುವುದಕ್ಕೆ ಅಥವಾ ಸ್ವಯಂ ಕಡ್ಡಾಯಗೊಳಿಸಿಕೊಂಡು ಅದನ್ನು ಮಾಡುತ್ತೇನೆಂದು ಘೋಷಿಸುವುದಕ್ಕೆ ನೇರ್ಚೆ (ಹರಕೆ) ಎನ್ನಲಾಗುತ್ತದೆ. ನೇರ್ಚೆ ಮಾಡಲು ಅಲ್ಲಾಹನಾಗಲಿ ಪ್ರವಾದಿ(ﷺ) ಯವರಾಗಲಿ ಕಲಿಸಿಕೊಟ್ಟಿಲ್ಲ. ನೇರ್ಚೆ ಮಾಡಿದರೆ ಅದನ್ನು ನೆರವೇರಿಸಿಕೊಡಬೇಕೆಂದು ಅಲ್ಲಾಹ್ ಮತ್ತು ಪ್ರವಾದಿ(ﷺ) ಯವರು ಆದೇಶಿಸಿದ್ದಾರೆ.

ಒಬ್ಬನು ತನಗಾಗಿ ಅಥವಾ ತನ್ನ ಕುಟುಂಬಕ್ಕಾಗಿ ಪ್ರಾರ್ಥಿಸಲು ಮಕ್ಕಳು ಅಥವಾ ಹಿರಿಯರೊಂದಿಗೆ ವಿನಂತಿಸುವುದರಲ್ಲಿ ಯಾವುದೇ ವಿರೋಧವಿಲ್ಲ. ದಾನ ಲಭಿಸಿದವರು ದಾನ ನೀಡಿದವರ ಒಳಿತಿಗಾಗಿ ಪ್ರಾರ್ಥಿಸುವುದು ಕೃತಜ್ಞತೆಯ ಒಂದು ರೂಪವಾಗಿದೆ. ಪ್ರವಾದಿ(ﷺ) ಯವರು ಝಕಾತಿನ ಫಲಾನುಭವಿಯಾಗಿರಲಿಲ್ಲ. ಆದರೂ ಅಲ್ಲಾಹನು ಝಕಾತ್ ನೀಡುವವರಿಗಾಗಿ ಪ್ರಾರ್ಥಿಸಬೇಕೆಂದು ಪ್ರವಾದಿ(ﷺ) ಯವರಿಗೆ ಆಜ್ಞಾಪಿಸಿದ್ದಾನೆ. ಯತೀಂ ಮಕ್ಕಳಂತೆ ಕೆಲವರಿಗೆ ಒಟ್ಟಾಗಿ ದಾನ ಲಭಿಸಿದರೆ ಅವರು ಅದನ್ನು ನೀಡಿದವರಿಗಾಗಿ ಸಾಮೂಹಿಕವಾಗಿ ಪ್ರಾರ್ಥಿಸುವುದರಲ್ಲಿ ಅರೋಚಕತೆ ಇಲ್ಲ. ಆದರೆ ಇಂತಹ ಸಾಮೂಹಿಕ ಪ್ರಾರ್ಥನೆ ಒಂದು ಯಾಂತ್ರಿಕ ವಿಧಿಯಾಗುವುದು ಸರಿಯಲ್ಲ. ■

# ಸಹೋದರತೆಯ ಬೇಡಿಕೆಗಳು

ರೋಗ ಪೀಡಿತನಾದ ಮುಸ್ಲಿಂ ಸಹೋದರನನ್ನು ಸಂದರ್ಶಿಸುವುದು ಕೂಡಾ ಸಹೋದರತೆಯ ಬೇಡಿಕೆಗಳಲ್ಲಿ ಒಂದಾಗಿದೆ. ಚಿಕಿತ್ಸೆಗೆ ಅವನಲ್ಲಿ ಸಾಮರ್ಥ್ಯವಿಲ್ಲವೆಂದಾದರೆ ಅವನಿಗೆ ಚಿಕಿತ್ಸೆ ದೊರಕಿಸಿ ಕೊಡಬೇಕಾಗಿದೆ. ಅವನಿಗೆ ಉಡುಪು ಇಲ್ಲದಿದ್ದರೆ ಉಡುಪು ನೀಡುವುದು, ಆಹಾರವಿಲ್ಲದಿದ್ದರೆ ಆಹಾರ ಒದಗಿಸುವುದು, ಮಕ್ಕಳ ಶಿಕ್ಷಣಕ್ಕೆ ಸಹಕರಿಸುವುದು, ಒಂದೊಮ್ಮೆ ಅವನಿಗೆ ಪತ್ನಿ ಇಲ್ಲದಿದ್ದರೆ ಅವನಿಗೆ ಸಂಗಾತಿಯ ಏರ್ಪಾಡು ಮಾಡುವುದು ಕೂಡಾ ಇಸ್ಲಾಮಿ ಸಹೋದರತೆಯ ಬೇಡಿಕೆಯಾಗಿದೆ.

ಅಲ್ಲಾಹನ ಸಂದೇಶವಾಹಕರಾದ ಮುಹಮ್ಮದ್(ﷺ) ಹೇಳಿದರು:

«الْمُسْلِمُ أَخُو الْمُسْلِمِ».

“ಮುಸ್ಲಿಮರು ಪರಸ್ಪರ ಸಹೋದರರಾಗಿರುತ್ತಾರೆ.” (ಸಹೀಹ್ ಮುಸ್ಲಿಂ ಹದೀಸ್ ನಂ 2580)

ಇದೇ ಹದೀಸಿನಲ್ಲಿ ಮುಸಲ್ಮಾನರ ಆಂತರಿಕ ಸಂಬಂಧ ಮತ್ತು ಸಹೋದರತೆಯನ್ನು ಬಹಳ ವಸ್ತುನಿಷ್ಠವಾಗಿ ಈ ರೀತಿ ಉಲ್ಲೇಖಿಸಲಾಗಿದೆ.

“ಒಬ್ಬ ಮುಸಲ್ಮಾನ ಇನ್ನೊಬ್ಬ ಮುಸ್ಲಿಮನ ಮೇಲೆ ಅಕ್ರಮವೆಸಗಬಾರದು, ಸಮಸ್ಯೆ-ಸಂಕಷ್ಟಗಳ ಸಂದರ್ಭದಲ್ಲಿ ಅವನ ಕೈಬಿಡಬಾರದು. ಯಾರು ತನ್ನ ಸಹೋದರನ ಅಭಿಲಾಷೆಯನ್ನು ಪೂರ್ತಿಗೊಳಿಸುವ ಕಾರ್ಯದಲ್ಲಿ ಅವನಿಗೆ ಸಹಾಯ ಮಾಡುತ್ತಾರೋ ಅವರಿಗೆ ಅಲ್ಲಾಹು ಅವರ ಅಭಿಲಾಷೆಗಳನ್ನು ಈಡೇರಿಸಿಕೊಳ್ಳಲು ಸಹಾಯ ಮಾಡುತ್ತಾನೆ. ಯಾರು ಓರ್ವ ಮುಸಲ್ಮಾನನನ್ನು ಸಂಕಷ್ಟದಿಂದ ಪಾರುಗೊಳಿಸುತ್ತಾನೆ ಅಲ್ಲಾಹು ಅವನನ್ನು ಕಿಯಾಮತ್‌ನ ದಿನದ ಯಾವುದಾದರೊಂದು ಸಂಕಷ್ಟದಿಂದ ಪಾರು ಮಾಡುತ್ತಾನೆ. ಮುಸಲ್ಮಾನರ ಕುಂದು-ಕೊರತೆಗಳನ್ನು ಯಾರು ಮರೆಮಾಚುತ್ತಾರೋ ಅಲ್ಲಾಹು ಕಿಯಾಮತ್‌ನ ದಿನ ಅವನ ಕುಂದು-ಕೊರತೆಗಳ ಮೇಲೆ ಪರದೆ ಹಾಕುವನು.”

ಸಹಾಯವೆಂದರೆ ಆರ್ಥಿಕ ಸಹಾಯ, ಉದ್ಯೋಗ ಅಥವಾ ಸಂಪಾದನೆಯ ದಾರಿ ತೋರಿಸುವುದು, ಅನುಮತಿಸಲ್ಪಟ್ಟ ರೀತಿಯಲ್ಲಿ ಶಿಫಾರಸ್ಸು ಮಾಡುವುದು. ಈ ರೀತಿಯ ಇನ್ನಿತರ ಸಹಾಯಗಳಾಗಿವೆ. ಕುಂದು-ಕೊರತೆಗಳನ್ನು ಮರೆಮಾಚುವುದೆಂದರೆ ಓರ್ವ ಸತ್ಯನಿಷ್ಠ, ಪ್ರಾಮಾಣಿಕ ವ್ಯಕ್ತಿ ಅಕಸ್ಮಾತ್ ಯಾವುದಾದರೂ ಕೆಡುಕು ಪ್ರವರ್ತಿಸುವುದನ್ನು ಕಂಡರೆ ಅದನ್ನು ಬಹಿರಂಗಪಡಿಸದೇ ಇರುವುದಾಗಿದೆ. ತಪ್ಪು ಮಾನವ ಸಹಜವೆಂದು ತಿಳಿದು ಅದನ್ನು ಮರೆಮಾಚಬೇಕು. ಇನ್ನು ವಂಚನೆ, ಮೋಸ, ದ್ರೋಹ, ಅಕ್ರಮವನ್ನು ವೃತ್ತಿಯಾಗಿ ಮಾಡಿಕೊಂಡವರು, ಜನರ ಮುಂದೆ ಸಭ್ಯತೆಯ, ಪ್ರಾಮಾಣಿಕತೆಯ ವೇಷ ಧರಿಸಿ ತೆರೆಯ ಮರೆಯಲ್ಲಿ ಜನರನ್ನು ಶೋಷಣೆ ನಡೆಸುವವರು, ಸಮಾಜದಲ್ಲಿ, ಸಮುದಾಯದಲ್ಲಿ ಕೆಡುಕು, ಅನೈತಿಕತೆ, ಅಧಾರ್ಮಿಕತೆಯನ್ನು ಹರಡುವ ಇರುತಲೆಗಳ ವಿದ್ರೋಹಿಗಳ ಬಗ್ಗೆ ಜನಜಾಗೃತಿಗೊಳಿಸುವುದು ಅಪೇಕ್ಷಣೀಯ ಕಾರ್ಯವೇ ಆಗುತ್ತದೆ. ಸಮಾಜದಲ್ಲಿ ಕೆಡುಕನ್ನು ತಡೆಗಟ್ಟುವ ನೆಲೆಯಲ್ಲಿ ಸಮಾಜ ವಿರೋಧಿಗಳ ಕುರಿತು ಮತ್ತು ಅಂತಹ ಚಟುವಟಿಕೆಗಳ ಕುರಿತು ಸಂಬಂಧಪಟ್ಟ ಅಧಿಕಾರಿಗಳ ಗಮನಕ್ಕೆ ತರುವುದು

*41 ನೇ ಪುಟಕ್ಕೆ*

# ರೋಗಿ ಸಂದರ್ಶನ—ಶ್ರೇಷ್ಠತೆಗಳು, ನಿಯಮಗಳು ಮತ್ತು ಶಿಷ್ಟಾಚಾರಗಳು

✍ ನೂರಿಸ್ ಅಲ್ ಹಾಶಿಮೀ

(ಕಳೆದ ಸಂಚಿಕೆಯಿಂದ)

**ರೋಗಿ ಸಂದರ್ಶನದ ಪ್ರತಿಫಲಗಳು:**

ರೋಗಿ ಸಂದರ್ಶನ ಮಾಡುವುದಕ್ಕೆ ಮಹಾ ಪ್ರತಿಫಲಗಳಿವೆ ಎಂಬುದು ಸ್ಪಷ್ಟ. ಅಲ್ಲಾಹು ಇದನ್ನು ಪ್ರೋತ್ಸಾಹಿಸಿದ್ದಾನೆ. ಬುದ್ಧಿವಂತ ಮುಸಲ್ಮಾನ ಒಳಿತಿನ ಕಾರ್ಯಗಳನ್ನು ಮಾಡಲು ಅತ್ಯಾಸಕ್ತ-ನಾಗಿರುತ್ತಾನೆ. ರೋಗಿ ಸಂದರ್ಶನ ಮಾಡುವುದರಲ್ಲಿ ಅನೇಕ ಮಹಾ ಪ್ರಯೋಜನಗಳಿವೆ. ರೋಗಿಗೆ ಸಂತೋಷವಾಗುವಂತೆ ಮಾಡುವುದು, ರೋಗಿ ನೋವನ್ನು ಮರೆಯುವಂತೆ ಮಾಡುವುದು ಮತ್ತು ರೋಗಿಗೆ ಉಪದೇಶ ಮಾಡುವುದು ಅವುಗಳಲ್ಲಿ ಕೆಲವು.

عَـــنْ عَلِيٍّ رَضِيَ اللَّهُ عَنْهُ، قَالَ: سَـــمِعْتُ رَسُـــولَ اللَّهِ صَلَّـــى اللَّهُ عَلَيْـــهِ وَسَـــلَّمَ يَقُولُ: «مَـــنْ أَتَى أَخَـــاهُ الْمُسْـــلِمَ عَائِدًا مَشَـــى فِـــي خَرَافَـــةِ الْجَنَّةِ حَتَّـــى يَجْلِسَ. فَإِذَا جَلَـــسَ غَمَرَتْـــهُ الرَّحْمَةُ. فَإِنْ كَانَ غُـــدْوَةً صَلَّى عَلَيْهِ سَـــبْعُونَ أَلْـــفَ مَلَكٍ حَتَّى يُمْسِـــيَ. وَإِنْ كَانَ مَسَـــاءً صَلَّى عَلَيْهِ سَبْعُونَ أَلْفَ مَلَكٍ حَتَّـــى يُصْبِحَ».

ಅಲೀ(﵁) ರಿಂದ ವರದಿ: ಅವರು ಹೇಳುತ್ತಾರೆ: ಅಲ್ಲಾಹನ ಸಂದೇಶವಾಹಕರು(ﷺ) ಹೀಗೆ ಹೇಳುವುದನ್ನು ನಾನು ಕೇಳಿದ್ದೇನೆ: “ರೋಗಿಯಾಗಿರುವ ತನ್ನ ಮುಸಲ್ಮಾನ ಸೋದರನನ್ನು ಯಾರಾದರೂ ಸಂದರ್ಶಿಸಿದರೆ ಅವನು ಅಲ್ಲಿ ಕುಳಿತುಕೊಳ್ಳುವ ತನಕ ಸ್ವರ್ಗದ ದಾರಿಯಲ್ಲಿ ಚಲಿಸುತ್ತಿರುವನು. ಅವನು ಅಲ್ಲಿ ಕುಳಿತುಕೊಂಡರೆ ಕಾರುಣ್ಯವು ಅವನನ್ನು ಮುಚ್ಚಿಕೊಳ್ಳುವುದು. ಅದು ಬೆಳಗ್ಗಿನ ಸಮಯವಾಗಿದ್ದರೆ ಸಂಜೆಯ ತನಕ ಎಪ್ಪತ್ತು ಸಾವಿರ ಮಲಕ್‌ಗಳು ಅವನಿಗಾಗಿ ಪ್ರಾರ್ಥಿಸುವರು. ಅದು ಸಂಜೆಯಾಗಿದ್ದರೆ ಬೆಳಗ್ಗಿನ ತನಕ ಎಪ್ಪತ್ತು ಸಾವಿರ ಮಲಕ್‌ಗಳು ಅವನಿಗಾಗಿ ಪ್ರಾರ್ಥಿ-ಸುವರು.” (ಇಬ್ನ್ ಮಾಜ)

عَنْ أَبِي هُرَيْـــرَةَ رَضِيَ اللَّهُ عَنْهُ، قَالَ: قَالَ رَسُـــولُ اللَّـــهِ صَلَّى اللَّـــهُ عَلَيْهِ وَسَـــلَّمَ: «مَنْ عَـــادَ مَرِيضًا نَادَى مُنَادٍ مِنَ السَّـــمَاءِ: طِبْتَ، وَطَابَ مَمْشَـــاكَ، وَتَبَوَّأْتَ مِـــنَ الْجَنَّةِ مَنْزِلًا».

ಅಬೂ ಹುರೈರ(﵁) ರಿಂದ ವರದಿ: ಅವರು ಹೇಳುತ್ತಾರೆ: ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು: “ಒಬ್ಬ ರೋಗಿಯನ್ನು ಯಾರಾದರೂ ಸಂದರ್ಶಿಸಿದರೆ ಆಕಾಶದಿಂದ ಮಲಕ್‌ಗಳು

ಕರೆದು ಹೇಳುವರು: ನೀನು ಒಳ್ಳೆಯದನ್ನೇ ಮಾಡಿರುವೆ. ನಿನ್ನ ನಡೆ ಉತ್ತಮವಾಗಿದೆ. ನೀನು ಸ್ವರ್ಗದಲ್ಲಿ ಒಂದು ಮನೆಯನ್ನು ಸಿದ್ಧಪಡಿಸಿರುವೆ." (ಇಬ್ನ್ ಮಾಜ)

طِبْتَ (ನೀನು ಒಳ್ಳೆಯದನ್ನೇ ಮಾಡಿರುವೆ): ಅತ್ತೀಬೀ ಹೇಳುತ್ತಾರೆ: ಇದೊಂದು ಪ್ರಾರ್ಥನೆ. ಅಂದರೆ ಇಹಲೋಕದಲ್ಲಿ ನಿನ್ನ ಜೀವನವು ಸುಖವಾಗಿರಲಿ.

طَابَ مَمْشَاكَ ನಿನ್ನ ನಡೆ ಉತ್ತಮವಾಗಿದೆ—ಅಂದರೆ ನಿನ್ನ ನಡೆಯು ಪರಲೋಕದ ಕಡೆಗಾಗಿದೆ.

عَـــنْ عَلِيٍّ رَضِـــيَ اللَّهُ عَنْـــهُ، قَالَ: «مَا مِـــنْ رَجُلٍ يَعُودُ مَرِيضًا مُمْسِـــيًا إِلَّا خَرَجَ مَعَهُ سَـــبْعُونَ أَلْفَ مَلَكٍ يَسْـــتَغْفِرُونَ لَهُ حَتَّى يُصْبِحَ. وَكَانَ لَهُ خَرِيفٌ فِي الْجَنَّةِ. وَمَـــنْ أَتَاهُ مُصْبِحًا خَرَجَ مَعَهُ سَـــبْعُونَ أَلْفَ مَلَكٍ يَسْـــتَغْفِرُونَ لَهُ حَتَّى يُمْسِـــيَ. وَكَانَ لَهُ خَرِيفٌ فِـــي الْجَنَّةِ».

ಅಲೀ(ﷺ) ರಿಂದ ವರದಿ: ಅವರು ಹೇಳುತ್ತಾರೆ: "ಒಬ್ಬ ರೋಗಿಯನ್ನು ಯಾರಾದರೂ ಸಂಜೆಯ ವೇಳೆ ಸಂದರ್ಶಿಸಿದರೆ ಬೆಳಗ್ಗಿನ ತನಕ ಎಪ್ಪತ್ತು ಸಾವಿರ ಮಲಕ್‌ಗಳು ಅವನಿಗೆ ಕ್ಷಮೆ ಬೇಡುತ್ತಾ ಅವನೊಂದಿಗೆ ಹೊರಡುವರು. ಅವನಿಗೆ ಸ್ವರ್ಗದಲ್ಲಿ ಒಂದು ಉದ್ಯಾನವನ್ನು ನಿರ್ಮಿಸಲಾಗುವುದು. ಯಾರಾದರೂ ಬೆಳಗ್ಗಿನ ಸಮಯದಲ್ಲಿ ಸಂದರ್ಶಿಸಿದರೆ ಎಪ್ಪತ್ತು ಸಾವಿರ ಮಲಕ್‌ಗಳು ಸಂಜೆಯ ತನಕ ಅವನಿಗೆ ಕ್ಷಮೆ ಬೇಡುತ್ತಾ ಅವನೊಂದಿಗೆ ಹೊರಡುವರು. ಅವನಿಗೆ ಸ್ವರ್ಗದಲ್ಲಿ ಒಂದು ಉದ್ಯಾನವನ್ನು ನಿರ್ಮಿಸಲಾಗುವುದು." (ಅಬೂದಾವೂದ್)

"ತನ್ನ ಸಹೋದರನಾದ ಮುಸ್ಲಿಂ ರೋಗಿಯನ್ನು ಸಂದರ್ಶಿಸುವಾಗ ಮಲಕ್‌ಗಳು ಅವನಿಗೆ ಅವನು ಸಂದರ್ಶಿಸಲು ಹೊರಟ ಸಮಯದಿಂದ ಮರುದಿನದ ತನಕ ಪ್ರಾರ್ಥಿಸುತ್ತಾರೆ." (ಗಝಾಉಲ್ ಅಲ್ಬಾಬ್ ಫೀ ಶರ್ಹಿ ಮನ್‌ಝೂಮತಿಲ್ ಆದಾಬ್ 2/4)

ಇಬ್ನ್ ಉಸೈಮೀನ್(ﷺ) ಹೇಳುತ್ತಾರೆ: "ಇದು ರೋಗಿ ಸಂದರ್ಶನದ ಶ್ರೇಷ್ಠತೆಗೆ ಪುರಾವೆಯಾಗಿದೆ. ಅದು ಬೆಳಗ್ಗಿನ ವೇಳೆಯಲ್ಲಾಗಿದ್ದರೆ ಇಂತಹ ಪ್ರತಿಫಲವಿದೆ. ಅದು ಸಂಜೆಯ ವೇಳೆಯಲ್ಲಾಗಿದ್ದರೆ ಇಂತಹ ಪ್ರತಿಫಲವಿದೆ." (ಶರ್ಹು ರಿಯಾದಿಸ್ಸಾಲಿಹೀನ್ 4/472)

## ರೋಗಿ ಸಂದರ್ಶನದ ಶಿಷ್ಟಾಚಾರಗಳು:

ವಿದ್ವಾಂಸರು ಹೇಳುವ ಪ್ರಕಾರ ರೋಗಿ ಸಂದರ್ಶನ ಮಾಡುವವನು ರೋಗಿಗೆ ಶುಭವಾರ್ತೆಗಳನ್ನು ತಿಳಿಸಬೇಕು ಮತ್ತು ರೋಗ ಗುಣವಾಗುವ ಬಗ್ಗೆ ಅವನಲ್ಲಿ ನಿರೀಕ್ಷೆ ಹುಟ್ಟಿಸಬೇಕು. ಅವನಿಗೆ ಮಂತ್ರಿಸಿ ದೀರ್ಘಾಯುಷ್ಯಕ್ಕಾಗಿ ಪ್ರಾರ್ಥಿಸಬೇಕು. ರೋಗಿಯ ಮನೆಯಲ್ಲಿರುವ ಪರಿಕರಗಳೆಡೆಗೆ ದೃಷ್ಟಿ ಹಾಯಿಸಬಾರದು. ಏಕೆಂದರೆ ಕೆಲವೊಮ್ಮೆ ಮನೆಯ ಸ್ಥಿತಿಯು ತೀರಾ ಹದಗೆಟ್ಟಿರಬಹುದು. ತನ್ನ ಮನೆ ಚೊಕ್ಕವಾಗಿಲ್ಲದಿರುವುದರ ಬಗ್ಗೆ ಆಗ ಮನೆಯ ಯಜಮಾನನಿಗೆ ಬೇಸರವಾಗಬಹುದು.

ರೋಗಿಯ ಬಳಿ ತುಂಬಾ ಹೊತ್ತು ಕೂರಬಾರದು. ಕಾರಣ, ರೋಗಿಗೆ ಪತ್ನಿಯ ಅಥವಾ ಹತ್ತಿರದ ಸಂಬಂಧಿಕರ ಶುಶ್ರೂಷೆಯ ಅಗತ್ಯ ಬರಬಹುದು. ಆಗ ಇದು ಅದಕ್ಕೆ ತೊಡಕಾಗಬಹುದು. ಪ್ರವಾದಿ(ﷺ) ಯವರಿಂದ ವರದಿಯಾದ ಪ್ರಕಾರ ಅವರು ಮೂರು ದಿನಗಳ ಬಳಿಕವಲ್ಲದೆ ರೋಗಿಯನ್ನು ಸಂದರ್ಶಿಸುತ್ತಿರಲಿಲ್ಲ. ಕಾರಣ, ಮೊದಲನೆ ದಿನ ರೋಗವು ಕನಿಷ್ಠ ಮಟ್ಟದಲ್ಲಿದ್ದು ಅದು ನಿವಾರಣೆಯಾಗಬಹುದು. ಆಗ ರೋಗಿಯನ್ನು ಸಂದರ್ಶಿಸಿ ರೋಗಿಗೆ ಕಷ್ಟ ಕೊಡುವುದು ಸರಿಯಲ್ಲ. ಆದ್ದರಿಂದ ಸಂದರ್ಶನವು ಮೂರು ದಿನಗಳ ನಂತರವಾಗಿರಬೇಕು. (ಶರ್ಹ್ ಬುಲೂಗುಲ್ ಮರಾಮ್—ಅತಿಯ್ಯ ಸಾಲಿಮ್ ವಿರಚಿತ)

ಅಸ್ಸನ್‌ಆನೀ.ವರು 'ಅತ್ತನ್ವೀರ್'ನಲ್ಲಿ (2/41) ಹೇಳುತ್ತಾರೆ: "ಏಕೆಂದರೆ ರೋಗಿಯ ದೇಹ ಶಕ್ತಿ ಪಡೆದು ಉಪಶಮನವನ್ನು ಬಯಸುವಾಗ ಅದರ ಪ್ರಕೃತಿಯು ಬಲಿಷ್ಠವಾಗಿ ಅದರಲ್ಲಿ ಸಹಜತೆಯ ಉದ್ವೇಗವು ಉದ್ಭವವಾಗುತ್ತದೆ. ಇದು ರೋಗ ನಿವಾರಣೆಯಾಗಲು ಅಥವಾ ಕಡಿಮೆಯಾಗಲು ಸಹಾಯ ಮಾಡುತ್ತದೆ. ಔಷಧಿ ಸೇವಿಸುವ ಉದ್ದೇಶವೂ ಇದುವೇ ಆಗಿದೆ. ರೋಗಿಗೆ ಸಂತಸವಾಗುವಂತೆ ಮಾಡುವುದು, ನೋವನ್ನು ಮರೆಯುವಂತೆ ಮಾಡುವುದು ಮತ್ತು ರೋಗಿಯ ಮನಸ್ಸಿನಲ್ಲಿ ಚುರುಕುತನ ಮೂಡುವಂತೆ ಮಾಡುವುದು ರೋಗ ಗುಣವಾಗಲು ಅಥವಾ ಕಡಿಮೆಯಾಗಲು ಪರಿಣಾಮಕಾರಿಯಾಗಿದೆ. ಕಾರಣ, ಇದರಿಂದ ಆತ್ಮವು ಬಲಿಷ್ಠವಾಗಿ ನೋವನ್ನು ನಿವಾರಿಸಲು ಅಥವಾ ಕಡಿಮೆ ಮಾಡಲು ಪ್ರಕೃತಿಗೆ ಸಹಾಯ ಮಾಡುತ್ತದೆ. ರೋಗಿಗಳ ಆಪ್ತರು ಅಥವಾ ಅವರು ಗೌರವದಿಂದ ಕಾಣುವ ಜನರು ಅವರನ್ನು ಸಂದರ್ಶಿಸಿದರೆ ಅವರ ಶಕ್ತಿಗೆ ಹುಮ್ಮಸ್ಸು

ಬರುವುದನ್ನು ಅನೇಕ ರೋಗಿಗಳಲ್ಲಿ ನಾವು ಕಾಣುತ್ತೇವೆ. ಅವರನ್ನು ನೋಡುವುದು ಮತ್ತು ಅವರೊಂದಿಗೆ ಮಾತನಾಡುವುದು ಇವರಿಗೆ ಬಹಳ ಸಂತಸ ನೀಡುತ್ತದೆ. ಇದು ರೋಗಿ ಸಂದರ್ಶನದ ಪ್ರಯೋಜನಗಳಲ್ಲಿ ಒಂದಾಗಿದೆ.”

ಇಬ್ನ್ ಉಸೈಮೀನ್ ಹೇಳುತ್ತಾರೆ: “ನಿನ್ನಲ್ಲಿ ಮಾತನಾಡುವುದು ರೋಗಿಗೆ ಸಂತಸವನ್ನು ತರುವುದಾದರೆ, ನೀನು ಇನ್ನೂ ಸ್ವಲ್ಪ ಹೊತ್ತು ಅಲ್ಲಿರುವುದನ್ನು ರೋಗಿ ಇಷ್ಟಪಡುವುದಾದರೆ ಅದು ಒಳ್ಳೆಯದೇ ಆಗಿದೆ. ಅದರಲ್ಲಿ ತೊಂದರೆಯಿಲ್ಲ. ಇದು ಕೆಲವೊಮ್ಮೆ ರೋಗಿ ಗುಣಮುಖನಾಗಲು ಕಾರಣವಾಗಬಹುದು. ಕಾರಣ ರೋಗಿಗೆ ಸಂತಸವುಂಟಾಗುವಂತೆ ಮಾಡುವುದು ರೋಗ ಗುಣಮುಖವಾಗಲಿರುವ ಕಾರಣಗಳಲ್ಲಿ ಒಂದಾಗಿದೆ.” (ಶರ್ಹು ರಿಯಾದಿಸ್ಸಾಲಿಹೀನ್ 4/461)

## ಮುಶ್ರಿಕ್ ರೋಗಿಯನ್ನು ಸಂದರ್ಶಿಸುವುದು:

ಏನಾದರೂ ಒಳಿತಿದ್ದರೆ ಮುಶ್ರಿಕರಾದ ರೋಗಿಗಳನ್ನು ಸಂದರ್ಶಿಸಲು ಶರೀಅತ್ ಅನುಮತಿ ನೀಡುತ್ತದೆ. ಉದಾಹರಣೆಗೆ ಅವರನ್ನು ಇಸ್ಲಾಮಿಗೆ ಆಮಂತ್ರಿಸುವುದು ಇತ್ಯಾದಿ.

عَنْ أَنَسٍ رَضِيَ اللَّهُ عَنْهُ، أَنَّ غُلَامًا مِنَ الْيَهُودِ كَانَ يَخْدُمُ النَّبِيَّ صَلَّى اللَّهُ عَلَيْهِ وَسَلَّمَ فَمَرِضَ. فَأَتَاهُ النَّبِيُّ صَلَّى اللَّهُ عَلَيْهِ وَسَلَّمَ يَعُودُهُ. فَقَعَدَ عِنْدَ رَأْسِهِ فَقَالَ: «أَسْلِمْ». فَنَظَرَ إِلَى أَبِيهِ وَهُوَ عِنْدَ رَأْسِهِ. فَقَالَ لَهُ: أَطِعْ أَبَا الْقَاسِمِ. فَأَسْلَمَ. فَخَرَجَ النَّبِيُّ صَلَّى اللَّهُ عَلَيْهِ وَسَلَّمَ وَهُوَ يَقُولُ: «الْحَمْدُ لِلَّهِ الَّذِي أَنْقَذَهُ مِنَ النَّارِ».

ಅನಸ್(ﷺ) ರಿಂದ ವರದಿ: ಪ್ರವಾದಿ(ﷺ) ಯವರ ಚಾಕರಿ ಮಾಡುತ್ತಿದ್ದ ಒಬ್ಬ ಯಹೂದಿ ಹುಡುಗ ರೋಗಿಯಾದ. ಆಗ ಪ್ರವಾದಿ(ﷺ) ಯವರು ಆತನನ್ನು ಸಂದರ್ಶಿಸಲು ಹೋದರು. ಅವರು ಆತನ ತಲೆಯ ಬಳಿ ಕುಳಿತು ಹೇಳಿದರು: “ಇಸ್ಲಾಮ್ ಸ್ವೀಕರಿಸು.” ಆತ ತನ್ನ ತಲೆಯ ಬಳಿ ನಿಂತಿದ್ದ ತಂದೆಯನ್ನು ನೋಡಿದ. ಅವರು ಹೇಳಿದರು: “ಅಬುಲ್ ಕಾಸಿಮ್(ﷺ) ರನ್ನು ಅನುಸರಿಸು.” ಆ ಹುಡುಗ ಇಸ್ಲಾಮ್ ಸ್ವೀಕರಿಸಿದ. ಪ್ರವಾದಿ(ﷺ) ಯವರು ಅಲ್ಲಿಂದ ಹೊರಬರುತ್ತಾ ಹೇಳಿದರು: “ಅವನನ್ನು ನರಕಾಗ್ನಿಯಿಂದ ರಕ್ಷಿಸಿದ ಅಲ್ಲಾಹನಿಗೆ ಸರ್ವಸ್ತುತಿ.” (ಸಹೀಹುಲ್ ಅದಬಿಲ್ ಮುಫ್ರದ್)

قَالَ سَعِيدُ بْنُ الْمُسَيَّبِ عَنْ أَبِيهِ: لَمَّا حُضِرَ أَبُو طَالِبٍ جَاءَهُ النَّبِيُّ صَلَّى اللَّهُ عَلَيْهِ وَسَلَّمَ.

ಸಈದ್ ಇಬ್ನ್ ಮುಸಯ್ಯಿಬ್ ತಮ್ಮ ತಂದೆಯಿಂದ ವರದಿ ಮಾಡಿ ಹೇಳುತ್ತಾರೆ: “ಅಬೂ ತಾಲಿಬ್ ಮರಣಶಯ್ಯೆಯಲ್ಲಿದ್ದಾಗ ಪ್ರವಾದಿ(ﷺ) ಯವರು ಅವರನ್ನು ಸಂದರ್ಶಿಸಲು ಹೋದರು.” (ಅಲ್‌ಬುಖಾರಿ)

ಇಬ್ನ್ ಬತ್ತಾಲ್ ಹೇಳುತ್ತಾರೆ: “ಮುಶ್ರಿಕ್ ರೋಗಿಯನ್ನು ಸಂದರ್ಶಿಸುವುದು ಆತನನ್ನು ಇಸ್ಲಾಮಿಗೆ ಆಮಂತ್ರಿಸಲು ಮಾತ್ರವಾಗಿರಬೇಕು. ಅದೂ ಆತ ಇಸ್ಲಾಮ್ ಸ್ವೀಕರಿಸಬಹುದೆಂಬ ನಿರೀಕ್ಷೆಯಿದ್ದರೆ ಮಾತ್ರ. ಪ್ರವಾದಿ(ﷺ) ಯವರು ಇಸ್ಲಾಮನ್ನು ಪ್ರಸ್ತುತಪಡಿಸಿದಾಗ ಆ ಯಹೂದಿ ಹುಡುಗ ಇಸ್ಲಾಮ್ ಸ್ವೀಕರಿಸಿದ್ದನ್ನು ನೀವು ನೋಡಿಲ್ಲವೇ? ಅದೇ ರೀತಿ ಪ್ರವಾದಿ(ﷺ) ಯವರು ತಮ್ಮ ದೊಡ್ಡಪ್ಪ ಅಬೂ ತಾಲಿಬರನ್ನೂ ಇಸ್ಲಾಮಿಗೆ ಆಮಂತ್ರಿಸಿದರು. ಆದರೆ ಅವರು ಇಸ್ಲಾಮ್ ಸ್ವೀಕರಿಸಬೇಕೆಂದು ಅಲ್ಲಾಹು ನಿರ್ಣಯಿಸಿಲ್ಲ. ಆದರೆ ಅವಿಶ್ವಾಸಿಗೆ ಇಸ್ಲಾಮಿನ ಬಗ್ಗೆ ಆಸಕ್ತಿಯಿಲ್ಲದಿದ್ದರೆ, ಆತ ಇಸ್ಲಾಮ್ ಸ್ವೀಕರಿಸಬಹುದೆಂಬ ನಿರೀಕ್ಷೆಯಿಲ್ಲದಿದ್ದರೆ ಆತನನ್ನು ಸಂದರ್ಶಿಸುವುದರಲ್ಲಿ ಅರ್ಥವಿಲ್ಲ.” (ಶರ್ಹು ಸಹೀಹಿಲ್ ಬುಖಾರಿ 9/380)

ಮುಹಮ್ಮದ್ ಇಬ್ನ್ ಆದಮ್ ಹೇಳುತ್ತಾರೆ: “ರೋಗಿಯಾದ ದಿಮ್ಮಿಯನ್ನು ಸಂದರ್ಶಿಸುವುದು ಪ್ರೋತ್ಸಾಹನೀಯವೆಂಬ ಅಭಿಪ್ರಾಯಕ್ಕೆ ನಾನು ಬೆಂಬಲ ನೀಡುತ್ತೇನೆ. ಇದು ಪ್ರವಾದಿ(ﷺ) ಯವರ ಚರ್ಯೆಯ ಅನುಸರಣೆ ಮತ್ತು ಆತ ಇಸ್ಲಾಮ್ ಸ್ವೀಕರಿಸಬಹುದೆಂಬ ನಿರೀಕ್ಷೆಯ ಆಧಾರದಲ್ಲಾಗಿದೆ. ಇಬ್ನ್ ಬತ್ತಾಲ್ ಹೇಳುವ “ಆದರೆ ಅವಿಶ್ವಾಸಿಗೆ ಇಸ್ಲಾಮಿನ ಬಗ್ಗೆ ಆಸಕ್ತಿಯಿಲ್ಲದಿದ್ದರೆ...” ಎಂಬ ಮಾತು ನನಗೆ ಸರಿ ಕಾಣುವುದಿಲ್ಲ. ಏಕೆಂದರೆ ಇದು ಪರಿಶೀಲಿಸಲಾದ ಅಭಿಪ್ರಾಯವಲ್ಲ. ಕಾರಣ ಸಂದರ್ಶನದ ಸಂದರ್ಭ ಆತನಿಗೆ ಇಸ್ಲಾಮಿನಲ್ಲಿ ಆಸಕ್ತಿಯಿಲ್ಲದಿರಬಹುದು. ಆದರೆ ನಂತರ ಆತ ಮನಸ್ಸು ಬದಲಾಯಿಸಿ ಆಸಕ್ತಿ ಹೊಂದಬಹುದು. ಆದ್ದರಿಂದ ಆತನ ಮೊದಲ ಸ್ಥಿತಿಯನ್ನು ಪರಿಗಣಿಸಿ ನಾವು ನಿರಾಶರಾಗಬಾರದು. ಸರಿಯಾದ ಅಭಿಪ್ರಾಯವೇನೆಂದು ಅಲ್ಲಾಹು ಮಾತ್ರ ಬಲ್ಲ. ನಾವು ಮರಳುವುದು ಅವನ ಬಳಿಗೇ ಆಗಿದೆ.” (ಶರ್ಹುಲ್

ಮುಜ್ತಬಾ 19/152)

## ಮೂರ್ಛೆಹೋದ ರೋಗಿಯನ್ನು ಸಂದರ್ಶಿಸುವುದು:

ಅಲ್‌ಮುನಾವೀ ಫೈದುಲ್ ಕದೀರ್‌ನಲ್ಲಿ (4/296) ಹೇಳುತ್ತಾರೆ: "ರೋಗಿಗೆ ಸಂದರ್ಶಕನ ಬಗ್ಗೆ ಅರಿವುಂಟಾಗಬೇಕು ಎನ್ನುವುದನ್ನು ರೋಗಿ ಸಂದರ್ಶನದ ಸುನ್ನತ್ತಾಗಿ ಪರಿಗಣಿಸಲಾಗುವುದಿಲ್ಲ. ಬದಲಾಗಿ ರೋಗಿ ಮೂರ್ಛೆಯಲ್ಲಿದ್ದರೂ ಸಂದರ್ಶಿಸುವುದು ಸುನ್ನತ್ತಾಗಿದೆ. ಕಾರಣ, ಇದರ ಹಿಂದೆ ರೋಗಿಯ ಮನೆಯವರಿಗೆ ಸಾಂತ್ವನವಾಗುವುದು, ಸಂದರ್ಶಕನ ಪ್ರಾರ್ಥನೆಯ ಬರಕತ್ ರೋಗಿಗೆ ಲಭ್ಯವಾಗುವುದು, ಸಂದರ್ಶಕನು ರೋಗಿಯ ದೇಹದಲ್ಲಿ ಕೈಯಿಟ್ಟು ಅಲ್ಲಾಹನಲ್ಲಿ ರಕ್ಷೆ ಬೇಡುವುದು ಮುಂತಾದ ಕಾರ್ಯಗಳಿವೆ. ಇದನ್ನು ಫತ್‌ಹುಲ್ ಬಾರಿ ಮುಂತಾದ ಗ್ರಂಥಗಳಲ್ಲಿ ಪ್ರಸ್ತಾವಿಸಲಾಗಿದೆ."

ಇಬ್ನ್ ಬತ್ತಾಲ್ ಹೇಳುತ್ತಾರೆ: "ಕೈಯನ್ನು ರೋಗಿಯ ಮೇಲಿಡುವುದರಿಂದ ರೋಗಿಗೆ ಭಾವವಿರೇಚನವುಂಟಾಗುತ್ತದೆ. ಆತನ ದುಗುಡ ಕಡಿಮೆಯಾಗಲು ಕಾರಣವಾಗುತ್ತದೆ. ಇನ್ನು ಸಂದರ್ಶಿಸುವ ವ್ಯಕ್ತಿ ಸಜ್ಜನನಾಗಿದ್ದರೆ ಸಂದರ್ಭಕ್ಕೆ ತಕ್ಕಂತೆ ಪ್ರಾರ್ಥಿಸಬೇಕು ಮತ್ತು ಕೆಲವೊಮ್ಮೆ ಕೈಯಿಂದ ನೋವಿರುವ ಭಾಗವನ್ನು ಸವರುತ್ತಾ ಮಂತ್ರಿಸಬೇಕು."

## ಎಲ್ಲ ಸಮಯಗಳಲ್ಲೂ ರೋಗಿಯನ್ನು ಸಂದರ್ಶಿಸಬಹುದೇ?

ಈ ಬಗ್ಗೆ ವಿದ್ವಾಂಸರಿಗೆ ಅನೇಕ ಅಭಿಪ್ರಾಯಗಳಿವೆ.

ಕೆಲವರ ಪ್ರಕಾರ ಎಲ್ಲ ಸಂದರ್ಭಗಳಲ್ಲೂ ಸಂದರ್ಶಿಸಬಹುದು. ಕೆಲವರ ಪ್ರಕಾರ ದಿನ ಬಿಟ್ಟು ದಿನ ಸಂದರ್ಶಿಸಬಹುದು.

عَنْ عَائِشَةَ رَضِيَ اللَّهُ عَنْهَا، قَالَتْ: لَمَّا أُصِيبَ سَعْدُ بْنُ مُعَاذٍ يَوْمَ الْخَنْدَقِ، رَمَاهُ رَجُلٌ فِي الْأَكْحَلِ، فَضَرَبَ عَلَيْهِ رَسُولُ اللَّهِ صَلَّى اللَّهُ عَلَيْهِ وَسَلَّمَ خَيْمَةً فِي الْمَسْجِدِ لِيَعُودَهُ مِنْ قَرِيبٍ.

ಆಯಿಶಾ(ﵞ) ರಿಂದ ವರದಿ: ಅವರು ಹೇಳುತ್ತಾರೆ: "ಖಂದಕ್ ಯುದ್ಧದ ಸಂದರ್ಭ ಸಅ್‌ದ್(﵁) ರಿಗೆ ಗಾಯವಾಯಿತು. ಅವರ ಕೈಯ ರಕ್ತನಾಳಕ್ಕೆ ಒಬ್ಬ ವ್ಯಕ್ತಿ ಬಾಣ ಬಿಟ್ಟಿದ್ದ. ಆಗ ಪ್ರವಾದಿ(ﷺ) ಯವರು ಅವರನ್ನು ಹತ್ತಿರದಿಂದಲೇ ಸಂದರ್ಶಿಸುವಂತಾಗಲು ಮಸೀದಿಯಲ್ಲಿ ಒಂದು ಡೇರೆಯನ್ನು ಕಟ್ಟಿದರು." (ಅಬೂದಾವೂದ್)

ಈ ಹದೀಸಿನ ಆಧಾರದಲ್ಲಿ ಪ್ರವಾದಿ(ﷺ) ಯವರು ಅವರನ್ನು ಪದೇ ಪದೇ ಸಂದರ್ಶಿಸುತ್ತಿದ್ದರು ಎಂದು ಸಾಬೀತಾಗುತ್ತದೆ.

ಹಾಫಿಝ್ ಇಬ್ನ್ ಅಬ್ದಿಲ್ ಬರ್ರ್ 'ಅತ್ತಮ್‌ಹೀದ್'ನಲ್ಲಿ (24/277) ಹೇಳುತ್ತಾರೆ:

"ಈ ಹದೀಸ್‌ನ ಆಧಾರದಲ್ಲಿ ಮತ್ತು ಸಾರ್ವತ್ರಿಕ ಅಭಿಪ್ರಾಯದ ಪ್ರಕಾರ ಎಲ್ಲ ಸಮಯಗಳಲ್ಲೂ ರೋಗಿಯನ್ನು ಸಂದರ್ಶಿಸಬಹುದು. ಆದರೆ ಕೆಲವು ಸಂದರ್ಭಗಳಲ್ಲಿ ಸಂದರ್ಶಿಸುವುದನ್ನು ವಿದ್ವಾಂಸರು ಅಸಹ್ಯಪಡುತ್ತಾರೆ."

ಅಲ್‌ಅಸ್ರಮ್ ಹೇಳುತ್ತಾರೆ: "ಅಬೂ ಅಬ್ದುಲ್ಲಾಹ್ (ಇಮಾಂ ಅಹ್ಮದ್) ಹೀಗೆ ಹೇಳುವುದನ್ನು ನಾನು ಕೇಳಿದ್ದೇನೆ: ಅವರೊಂದಿಗೆ ಒಬ್ಬ ಶೈಖರು ತಮ್ಮ ಸೇವೆ ಮಾಡುತ್ತಿದ್ದ ಒಬ್ಬ ವ್ಯಕ್ತಿ ಒಬ್ಬ ರೋಗಿಯನ್ನು ಬೇಸಿಗೆಯ ಮಧ್ಯಾಹ್ನದ ಸಮಯದಲ್ಲಿ ಸಂದರ್ಶಿಸುತ್ತಿದ್ದರೆಂದು ಹೇಳಿದರು. ಆಗ ಅವರು ಹೇಳಿದರು: ಇದು ಸಂದರ್ಶನ ಮಾಡುವ ಸಮಯವಲ್ಲ."

ಅಶ್ಅಲ್‌ಬೀಯವರಿಂದ ವರದಿ: ಅವರು ಹೇಳುತ್ತಾರೆ: "ಊರಿನ ಮೂರ್ಖರು ಸಂದರ್ಶನ ಮಾಡುವುದು ರೋಗಿಗಳ ಮನೆಯವರ ಪಾಲಿಗೆ ರೋಗಿಯ ರೋಗಕ್ಕಿಂತಲೂ ಅಸಹನೀಯವಾಗಿದೆ. ಕಾರಣ ಅವರು ಸಮಯವಲ್ಲದ ಸಮಯದಲ್ಲಿ ಸಂದರ್ಶನಕ್ಕೆ ಬರುತ್ತಾರೆ ಮತ್ತು ಗಂಟೆಗಟ್ಟಲೆ ಅಲ್ಲೇ ಕೂರುತ್ತಾರೆ!"

عَنْ طَاوُوسٍ قَالَ: «أَفْضَلُ الْعِيَادَةِ أَخَفُّهَا.

ತಾವೂಸ್‌ರಿಂದ ವರದಿ: ಅವರು ಹೇಳುತ್ತಾರೆ: "ಹಗುರವಾದ ಸಂದರ್ಶನ ಶ್ರೇಷ್ಠ ಸಂದರ್ಶನ."

"ಹಗುರವಾದ ಸಂದರ್ಶನ ಶ್ರೇಷ್ಠ ಸಂದರ್ಶನ" ಎಂಬ ಹದೀಸಿನ ವ್ಯಾಖ್ಯಾನದಲ್ಲಿ ಇಬ್ನ್ ವದ್ದಾಹ್ ಹೇಳುತ್ತಾರೆ: "ಅಂದರೆ ಇದರ ಅರ್ಥ ರೋಗಿಯನ್ನು ಸಂದರ್ಶಿಸುವಾಗ ಅಲ್ಲಿ ಬಹಳ ಹೊತ್ತು ಕೂರಬಾರದು."

ಅಲ್‌ಅಬ್ಬಾದ್ ಹೇಳುತ್ತಾರೆ: "ಪದೇ ಪದೇ ಸಂದರ್ಶಿಸುವುದರ

ಬಗ್ಗೆ ನಂತರ ಅಬೂದಾವೂದ್‌ರವರು ಒಂದು ಅಧ್ಯಾಯವನ್ನು ನೀಡುತ್ತಾರೆ. ಅಂದರೆ ಪದೇ ಪದೇ ಸಂದರ್ಶಿಸಬಹುದು ಎನ್ನುವುದಕ್ಕೆ ಪುರಾವೆಯಾಗಿ. ಅದರಲ್ಲಿ ಅವರು ಆಯಿಶಾ (ﷺ) ರವರ ಹದೀಸನ್ನು ಉಲ್ಲೇಖಿಸಿದ್ದಾರೆ: ಖಂದಕ್ ಯುದ್ಧದ ಸಂದರ್ಭ ಸಅ್‌ದ್ ಇಬ್ನ್ ಮುಆಝ್(ﷺ)—ಔಸ್ ಗೋತ್ರದ ನಾಯಕರು— ರವರ ಕೈಯ ರಕ್ತನಾಳಕ್ಕೆ ಒಬ್ಬ ವ್ಯಕ್ತಿ ಬಾಣಬಿಟ್ಟ ಕಾರಣ ಅವರು ಗಾಯಾಳುವಾದರು. ಆಗ ಅಲ್ಲಾಹನ ಸಂದೇಶವಾಹಕರು(ﷺ) ಮಸೀದಿಯಲ್ಲಿ ಅವರಿಗೆ ಒಂದು ಡೇರೆಯನ್ನು ಕಟ್ಟಿದರು. ಅವರು ಅವರನ್ನು ಹತ್ತಿರದಿಂದ ಸಂದರ್ಶಿಸುವಂತಾಗಲು. ಅಂದರೆ ಪದೇ ಪದೇ ಸಂದರ್ಶಿಸುವಂತಾಗಲು ಅವರು ತನ್ನ ಹತ್ತಿರದಲ್ಲಿಯೇ ಇರುವುದಕ್ಕಾಗಿ ಒಂದು ಡೇರೆಯನ್ನು ಕಟ್ಟಿದರು. ಪದೇ ಪದೇ ಸಂದರ್ಶಿಸುವುದನ್ನು ಸೂಚಿಸುವ ಇನ್ನೊಂದು ಹದೀಸನ್ನು ಈಗಾಗಲೇ ಮೇಲೆ ಉಲ್ಲೇಖಿಸಲಾಗಿದೆ. ಅದು ಜಾಬಿರ್(ﷺ) ರವರ ಹದೀಸ್:

كَانَ يَعُودُنِي مَاشِيًا.

“ಅವರು (ಪ್ರವಾದಿ(ﷺ) ಯವರು) ನಡೆದುಕೊಂಡು ಬಂದು ನನ್ನನ್ನು ಸಂದರ್ಶಿಸುತ್ತಿದ್ದರು.”

ನಾವು ಅಲ್ಲಿ (ಹದೀಸಿನ ವ್ಯಾಖ್ಯಾನದಲ್ಲಿ) ಹೇಳಿದ್ದೇವೆ: ‘ಕಾನ’ ಎಂಬ ಪದವು ಕ್ರಿಯೆಯು ಪದೇ ಪದೇ ಸಂಭವಿಸುವುದನ್ನು ಸೂಚಿಸುತ್ತದೆ. ಆದ್ದರಿಂದ ಇದು ಪದೇ ಪದೇ ಸಂದರ್ಶಿಸುವುದಕ್ಕೆ ಪುರಾವೆಯಾಗಿದೆ. ಈ ಹದೀಸ್ ಕೂಡ ಪದೇ ಪದೇ ಸಂದರ್ಶಿಸುವುದಕ್ಕೆ ಪುರಾವೆಯಾಗಿದೆ. ಅಬೂದಾವೂದ್‌ರವರು ಇದಕ್ಕೊಂದು ಅಧ್ಯಾಯವನ್ನೇ ನೀಡಿದ್ದಾರೆ.” (ಶರ್ಹ್ ಸುನನ್ ಅಬೀದಾವೂದ್)

ಇಬ್ನುಲ್ ಕಯ್ಯಿಮ್ ಹೇಳುತ್ತಾರೆ: “ಪ್ರವಾದಿ(ﷺ) ಯವರು ರೋಗಿ ಸಂದರ್ಶನವನ್ನು ಯಾವುದೇ ಒಂದು ದಿನಕ್ಕೆ ಅಥವಾ ಯಾವುದೇ ಒಂದು ಸಮಯಕ್ಕೆ ಸೀಮಿತಗೊಳಿಸಿಲ್ಲ. ಬದಲಾಗಿ ರಾತ್ರಿ ಹಗಲು ಮತ್ತು ಇತರೆಲ್ಲ ಸಮಯಗಳಲ್ಲೂ ಅವರು ತಮ್ಮ ಸಮುದಾಯಕ್ಕೆ ರೋಗಿ ಸಂದರ್ಶನ ಮಾಡುವುದನ್ನು ನಿರ್ದೇಶಿಸಿದ್ದಾರೆ.” (ಝಾದುಲ್ ಮಆದ್ 1/497)

ಇಬ್ನ್ ಮುಫ್ಲಿಹ್ ಹೇಳುತ್ತಾರೆ: “ಸರಿಯಾದ ಅಭಿಪ್ರಾಯವೇನೆಂದರೆ: ಬೆಳಗ್ಗೆ ಮತ್ತು ಸಂಜೆ ಸಂದರ್ಶನ ಮಾಡುವುದು ಪ್ರೋತ್ಸಾಹನೀಯ. ಕಾರಣ ಆ ಸಮಯದಲ್ಲಿ ಮಲಕ್‌ಗಳು ಅತಿಹೆಚ್ಚು ಪ್ರಾರ್ಥಿಸುತ್ತಾರೆ.” (ಅಲ್‌ಆದಾಬು ಶ್ಶರ್‌ಇಯ್ಯ)

ರೋಗಿಯ ಸ್ಥಿತಿಯನ್ನು ಗಮನದಲ್ಲಿಟ್ಟು ಸಂದರ್ಶನ ಮಾಡಲು ಯೋಗ್ಯವಾದ ಸಮಯವನ್ನು ಆರಿಸುವುದು ಶ್ರೇಷ್ಠಕರ. ಕಾರಣ, ಕೆಲವು ಸಂದರ್ಭಗಳಲ್ಲಿ ರೋಗಿ ಬಲಹೀನನಾಗಿದ್ದು ಸಂದರ್ಶಕರನ್ನು ಸ್ವೀಕರಿಸಿಕೊಳ್ಳಲು ಸಾಧ್ಯವಾಗದೇ ಹೋಗಬಹುದು. ಹೆಚ್ಚು ಬಲ್ಲವನು ಅಲ್ಲಾಹು.

## ರೋಗಿಗಾಗಿ ಪ್ರಾರ್ಥಿಸುವುದು:

ಸುನ್ನತ್ತಿನಲ್ಲಿ ದೃಢಪಟ್ಟಿರುವಂತೆ ರೋಗಿಗಾಗಿ ಈ ಕೆಳಗಿನ ಪ್ರಾರ್ಥಿಸಬೇಕಾದ ಅಗತ್ಯವಿದೆ.

«لَا بَأْسَ، طُهُورٌ إِنْ شَاءَ اللَّهُ».

“ಪರವಾಗಿಲ್ಲ, ಅಲ್ಲಾಹು ಇಚ್ಛಿಸಿದರೆ ಇದೊಂದು ಶುದ್ಧೀಕರಣವಾಗಿದೆ.” (ಅಲ್‌ಬುಖಾರಿ)

ರೋಗಿಗೆ ಗುಣಮುಖನಾಗುವಂತೆ ಮೂರು ಸಲ ಪ್ರಾರ್ಥಿಸಬೇಕಾಗಿದೆ. ಪ್ರವಾದಿ(ﷺ) ಯವರು ಸಅ್‌ದ್ ಇಬ್ನ್ ಅಬೀ ವಕ್ಕಾಸ್(ﷺ) ರನ್ನು ಸಂದರ್ಶಿಸಿದಾಗ ಮೂರು ಸಲ ಹೀಗೆ ಹೇಳಿದರು:

«اللَّهُمَّ اشْفِ سَعْدًا».

“ಓ ಅಲ್ಲಾಹನೇ! ಸಅ್‌ದ್‌ರನ್ನು ಗುಣಪಡಿಸು.” (ಅಲ್‌ಬುಖಾರಿ 5659, ಮುಸ್ಲಿಮ್ 1628)

ಪ್ರವಾದಿ(ﷺ) ಯವರು ರೋಗಿಯನ್ನು ತಮ್ಮ ಬಲಗೈಯಿಂದ ಸವರುತ್ತಾ ಹೀಗೆ ಪ್ರಾರ್ಥಿಸುತ್ತಿದ್ದರು:

«أَذْهِبِ الْبَاسَ رَبَّ النَّاسِ! وَاشْفِ أَنْتَ الشَّافِي. لَا شِفَاءَ إِلَّا شِفَاؤُكَ. شِفَاءً لَا يُغَادِرُ سَقَمًا».

“ಓ ಜನರ ರಬ್ಬೇ! ರೋಗವನ್ನು ನಿವಾರಿಸು. ಗುಣಪಡಿಸು. ನೀನೇ ಗುಣಪಡಿಸುವವನು. ನಿನ್ನ ಗುಣವಲ್ಲದೆ ಬೇರೆ ಗುಣವಿಲ್ಲ. ನಿನ್ನ ಗುಣವು ಯಾವುದೇ ರೋಗವನ್ನು ಉಳಿಸುವುದಿಲ್ಲ.” (ಮುಸ್ಲಿಮ್ 2191)

“ಮರಣದ ಅವಧಿಯನ್ನು ತಲುಪಿರದ ರೋಗಿಯನ್ನು ಸಂದರ್ಶಿಸಿ

ಯಾರಾದರೂ ಏಳು ಸಲ ಹೀಗೆ ಹೇಳಿದರೆ:

«أَسْــأَلُ اللَّــهَ الْعَظِيــمَ، رَبَّ الْعَــرْشِ الْعَظِيــمِ، أَنْ يَشْــفِيَكَ».

“ಮಹಾಮಹಿಮನಾದ ಅಲ್ಲಾಹನಲ್ಲಿ, ಮಹಾನ್ ಸಿಂಹಾಸನದ ಒಡೆಯನಲ್ಲಿ ನಿನ್ನನ್ನು ಗುಣಪಡಿಸಬೇಕೆಂದು ನಾನು ಬೇಡಿಕೊಳ್ಳುತ್ತೇನೆ.”

ಅಲ್ಲಾಹು ಅವನಿಗೆ ಆ ರೋಗದಿಂದ ಸೌಖ್ಯವನ್ನು ನೀಡದಿರಲಾರ.” (ಅಲ್‌ಮಿಶ್ಕಾತ್ 1553)

## ಸಂದರ್ಶಕನು ಮನೆಯಲ್ಲಿರುವ ಇತರ ವಸ್ತುಗಳ ಕಡೆಗೆ ದೃಷ್ಟಿ ಹಾಯಿಸಬಾರದು:

ಮನೆಯಲ್ಲಿರುವ ಇತರ ವಸ್ತುಗಳ ಕಡೆಗೆ ದೃಷ್ಟಿ ಹಾಯಿಸದಿರುವುದು, ಸಭ್ಯವಾಗಿ ಕೂರುವುದು ಮತ್ತು ಅತ್ತಿತ್ತ ನೋಡದಿರುವುದು ಸಂದರ್ಶಕನಿಗೆ ಸಂಬಂಧಿಸಿದಂತೆ ಕಡ್ಡಾಯವಾಗಿದೆ.

عَــنْ عَبْدِ اللَّهِ بْــنِ أَبِــي الْهُذَيْلِ قَالَ: دَخَــلَ عَبْدُ اللَّهِ بْــنُ مَسْــعُودٍ رَضِيَ اللَّــهُ عَنْهُ عَلَــى مَرِيضٍ يَعُــودُهُ، وَمَعَــهُ قَوْمٌ. وَفِــي الْبَيْتِ امْــرَأَةٌ. فَجَعَلَ رَجُلٌ مِــنَ الْقَوْمِ يَنْظُرُ إِلَــى الْمَرْأَةِ. فَقَــالَ لَهُ عَبْدُ اللَّــهِ: لَوْ انْفَقَــأَتْ عَيْنُــكَ كَانَ خَيْرًا لَكَ.

ಅಬ್ದುಲ್ಲಾಹ್ ಇಬ್ನ್ ಅಬಿಲ್ ಹುದೈಲ್‌ರಿಂದ ವರದಿ. ಅವರು ಹೇಳುತ್ತಾರೆ: “ಒಮ್ಮೆ ಅಬ್ದುಲ್ಲಾಹ್ ಇಬ್ನ್ ಮಸ್‌ಊದ್(ﷺ) ಕೆಲವು ಜನರೊಡನೆ ಒಬ್ಬ ರೋಗಿಯನ್ನು ಸಂದರ್ಶಿಸಲು ಹೋದರು. ಆ ಮನೆಯಲ್ಲಿ ಒಬ್ಬಳು ಮಹಿಳೆಯಿದ್ದಳು. ಆಗ ಅವರಲ್ಲೊಬ್ಬರು ಆ ಮಹಿಳೆಯ ಕಡೆಗೆ ನೋಡತೊಡಗಿದರು. ಆಗ ಅಬ್ದುಲ್ಲಾಹ್ ಇಬ್ನ್ ಮಸ್‌ಊದ್(ﷺ) ಹೇಳಿದರು: ನಾನು ನಿನ್ನ ಕಣ್ಣನ್ನು ಕಿತ್ತು ತೆಗೆಯುವುದು ನಿನಗೆ ಒಳಿತಾಗಿದೆ.” (ಸಹೀಹುಲ್ ಅದಬಿಲ್ ಮುಫ್ರದ್)

## ಸಂದರ್ಶಕನು ಎಲ್ಲಿ ಕೂರಬೇಕು?

ಸಂದರ್ಶಕನು ತಲೆಯ ಬಳಿ ಕೂರಬೇಕು.

عَــنِ ابْــنِ عَبَّاسٍ رَضِــيَ اللَّــهُ عَنْهُمَا، قَــالَ كَانَ النَّبِيُّ صَلَّــى اللَّهُ عَلَيْهِ وَسَــلَّمَ إِذَا عَــادَ الْمَرِيضَ جَلَسَ عِنْدَ رَأْسِــهِ. ثُمَّ قَالَ سَــبْعَ مَرَّاتٍ: «أَسْــأَلُ اللَّهَ الْعَظِيــمَ، رَبَّ الْعَرْشِ الْعَظِيمِ، أَنْ يَشْــفِيَكَ». فَــإِنْ كَانَ فِي أَجَلِهِ تَأْخِيــرٌ عُوفِيَ مِــنْ وَجْعِهِ ذَلِكَ.

ಇಬ್ನ್ ಅಬ್ಬಾಸ್(ﷺ) ರಿಂದ ವರದಿ. ಅವರು ಹೇಳುತ್ತಾರೆ: ಪ್ರವಾದಿ(ﷺ)ಯವರು ರೋಗಿಯನ್ನು ಸಂದರ್ಶಿಸಿದರೆ ತಲೆಯ ಬಳಿ ಕೂರುತ್ತಿದ್ದರು. ನಂತರ ಏಳು ಸಲ ಹೇಳುತ್ತಿದ್ದರು: “ಮಹಾಮಹಿಮನಾದ ಅಲ್ಲಾಹನಲ್ಲಿ, ಮಹಾನ್ ಸಿಂಹಾಸನದ ಒಡೆಯನಲ್ಲಿ ನಿನ್ನನ್ನು ಗುಣಪಡಿಸಬೇಕೆಂದು ನಾನು ಬೇಡಿಕೊಳ್ಳುತ್ತೇನೆ.” ರೋಗಿಗೆ ಇನ್ನೂ ಆಯುಷ್ಯವಿದ್ದರೆ ಇದರಿಂದ ನೋವು ನಿವಾರಣೆಯಾಗಿ ಸೌಖ್ಯ ಸಿಗಬಹುದು. (ಸಹೀಹುಲ್ ಅದಬಿಲ್ ಮುಫ್ರದ್)

عَنِ الرَّبِيعِ بْنِ عَبْــدِ اللَّهِ قَالَ: ذَهَبْتُ مَعَ الْحَسَــنِ إِلَى قَتَادَةَ نَعُودُهُ. فَقَعَدَ عِنْدَ رَأْسِــهِ. فَسَــأَلَهُ ثُمَّ دَعَا لَهُ. قَالَ: اللَّهُمَّ اشْــفِ قَلْبَهُ وَاشْفِ سُقْمَهُ.

ಅರ್ರಬೀಅ್ ಇಬ್ನ್ ಅಬ್ದುಲ್ಲಾಹ್‌ರಿಂದ ವರದಿ. ಅವರು ಹೇಳುತ್ತಾರೆ: ನಾನು ಅಲ್‌ಹಸನ್‌ರೊಂದಿಗೆ ಕತಾದರನ್ನು ಸಂದರ್ಶಿಸಲು ಹೋದೆ. ಆಗ ಅವರು ಅವರ ತಲೆಯ ಬಳಿ ಕೂತರು. ನಂತರ ಕುಶಲ ವಿಚಾರಿಸಿ ಪ್ರಾರ್ಥಿಸಿದರು. “ಓ ಅಲ್ಲಾಹನೇ! ಇವರ ಹೃದಯವನ್ನು ಗುಣಪಡಿಸು. ಇವರ ರೋಗವನ್ನು ಗುಣಪಡಿಸು.” (ಸಹೀಹುಲ್ ಅದಬಿಲ್ ಮುಫ್ರದ್)

## ಮಹಿಳೆಯರು ಪುರುಷರನ್ನು ಸಂದರ್ಶಿಸುವುದು:

ಇಮಾಂ ಅಲ್‌ಬುಖಾರಿ ಹೇಳುತ್ತಾರೆ:

بَــابُ عِيَادَةِ النِّسَــاءِ الرِّجَالَ. وَعَــادَتْ أُمُّ الدَّرْدَاءِ

رَجُــلًا مِنْ أَهْلِ الْمَسْــجِدِ مِــنَ الْأَنْصَارِ.

“ಅಧ್ಯಾಯ: ಮಹಿಳೆಯರು ಪುರುಷರನ್ನು ಸಂದರ್ಶಿಸುವುದು. ಉಮ್ಮು ದ್ದರ್ದಾಅ್(ﷺ) ರವರು ಮಸೀದಿಯ ನಿವಾಸಿಗಳಲ್ಲೊಬ್ಬ-ರಾದ ಅನ್ಸಾರಿ ವ್ಯಕ್ತಿಯನ್ನು ಸಂದರ್ಶಿಸಿದರು.”

ಹಾಫಿಝ್ ಇಬ್ನ್ ಅಬ್ದಿಲ್ ಬರ್ರ್ ‘ಅತ್ತಮ್‌ಹೀದ್’ನಲ್ಲಿ (6/255) ಹೇಳುತ್ತಾರೆ: “ಮಹಿಳೆಯರು ರೋಗಿಯನ್ನು ಸಂದರ್ಶಿಸಲು ಅನುಮತಿಯಿದೆ ಎನ್ನುವುದಕ್ಕೆ ಇದರಲ್ಲಿ ಪುರಾವೆಯಿದೆ. ಅವರು ಮಹ್ರಮ್‌ಗಳಲ್ಲದಿದ್ದರೂ ಸಹ. ಆದರೆ ನನ್ನ ಪ್ರಕಾರ ಆ ಮಹಿಳೆ ಅನ್ಯರನ್ನು ಕಣ್ಣೆತ್ತಿ ನೋಡದ ಕುಲೀನೆಯಾಗಿರಬೇಕು. ಆಕೆ ಕುಲೀ-ನೆಯಲ್ಲದಿದ್ದರೆ ಸಂದರ್ಶನ ಮಾಡಬಾರದು.”

ಹಾಫಿಝ್ ಇಬ್ನ್ ಹಜರ್ ‘ಫತ್‌ಹುಲ್ ಬಾರಿ’ಯಲ್ಲಿ (10/118) ಹೇಳುತ್ತಾರೆ: “ಪರ್ದ ಧರಿಸಬೇಕು ಎಂಬ ಷರತ್ತಿನ ಮೇರೆಗೆ ಇದಕ್ಕೆ ಅನುಮತಿಯಿದೆ.”

ಅಲ್‌ಬಹೂತೀ ಹೇಳುತ್ತಾರೆ: “ಫಿತ್ನದ ಭಯವಿಲ್ಲದಿದ್ದರೆ ಮಹಿಳೆಯ ನಿಯಮ ಪುರುಷನಿಗೆ ಸಮಾನ.” (ಶರ್ಹು ಮುನ್ತಹಲ್ ಇರಾದಾತ್ 1/339)

ಅಲ್‌ಅಬ್ಬಾದ್ ಹೇಳುತ್ತಾರೆ: “ರೋಗಿ ಸಂದರ್ಶನವು ಪ್ರೋತ್ಸಾಹ-ನೀಯವೂ ಶರೀಅತ್ ನಿರ್ದೇಶಿಸಿದ ಕಾರ್ಯವೂ ಆಗಿದೆ. ರೋಗಿ ಗಂಡಾಗಿದ್ದರೂ ಹೆಣ್ಣಾಗಿದ್ದರೂ ಅದರಲ್ಲಿ ವ್ಯತ್ಯಾಸವಿಲ್ಲ. ಮಹಿಳಾ ರೋಗಿಗಳನ್ನು ಮಹಿಳೆಯರು ಸಂದರ್ಶಿಸಬೇಕು ಮತ್ತು ಪುರುಷ ರೋಗಿಗಳನ್ನು ಪುರುಷರು ಸಂದರ್ಶಿಸಬೇಕು. ಮಹ್ರಮ್ (ವಿವಾ-ಹನಿಷಿದ್ಧ) ಸಂಬಂಧವಿದ್ದರೆ ಮಹಿಳೆಯರು ಪುರುಷರನ್ನು ಸಂದರ್ಶಿ-ಸುವುದರಲ್ಲಿ ದೋಷವಿಲ್ಲ. ಅದೇ ರೀತಿ ಪುರುಷರು ರೋಗಿಗಳಾದ ಮಹಿಳೆಯರನ್ನು ಸಂದರ್ಶಿಸುವುದು ಮತ್ತು ಅವರಿಗಾಗಿ ಅಲ್ಲಿ ಪ್ರಾರ್ಥಿಸುವುದರಲ್ಲಿ ದೋಷವಿಲ್ಲ ನಿಷಿದ್ಧವಾಗುವುದು ಫಿತ್ನವಿದ್ದರೆ ಅಥವಾ ರೋಗಿ ಮಹಿಳೆಯಾಗಿದ್ದು ಒಂಟಿಯಾಗಿದ್ದರೆ ಮಾತ್ರ.” (ಶರ್ಹ್ ಸುನನ್ ಅಬೀದಾವೂದ್) ■

*05 ನೇ ಪುಟದಿಂದ*

## ಸಂಪಾದಕೀಯ

ಅತ್ಯಧಿಕ ವಿನಯಾನ್ವಿತರಾಗಬೇಕಾಗಿದೆ. ಮತ್ತೊಬ್ಬರನ್ನು ವಂಚಿಸಿ, ಮೋಸಗೊಳಿಸಿ, ಕೊಂದು ನಾವು ನಿರ್ಮಿಸುತ್ತಿರುವ ಬೃಹತ್ ಕಟ್ಟಡಗಳು ಹಾಗೂ ವಿಜ್ಞಾನದ ಬಾಹ್ಯಾಕಾಶ ಯಾನ ಪ್ರಕೃತಿಯ ಚಿಕ್ಕದೊಂದು ಅಲುಗಾಟದ ಮುಂದೆ ಏನೇನೂ ಅಲ್ಲವೆಂದು ತಿಳಿಯಬೇಕಾಗಿದೆ.”

ಈ ಮೇಲಿನ ಕೆಲವು ಪದಪ್ರಯೋಗಗಳೊಂದಿಗೆ ನಮಗೆ ಸಹಮತವಿಲ್ಲದಿದ್ದರೂ, ಅದರಲ್ಲಿರುವ ಆಶಯವನ್ನು ಮೈಗೂಡಿಸಿಕೊಳ್ಳಬೇಕಾಗಿದೆ. ವಿಜ್ಞಾನ–ತಂತ್ರಜ್ಞಾನದಲ್ಲಾದ ಪ್ರಗ-ತಿಯನ್ನು ತೋರಿಸಿ ‘ದೇವನಿಲ್ಲ’ ಇದ್ದರೆ ಆ ದೇವನು ಮೃತಪಟ್ಟಿದ್ದಾ-ನೆಂದು ಪರಿಹಾಸ್ಯ ಮಾಡುವ ಯುಕ್ತಿವಾದಿಗಳು ಮತ್ತು ನಾಸ್ತಿಕರಿಗೆ ಪ್ರಳಯ, ಭೂಕಂಪದಂತಹ ದುರಂತಗಳು ಉತ್ತರ ನೀಡುತ್ತಿದೆ. ಮಾನವನ ಸಾಮರ್ಥ್ಯಗಳೆಲ್ಲ ನಿಷ್ಪ್ರಯೋಜಕವಾಗುವ ಕ್ಷಣದಲ್ಲಿ ನಾಸ್ತಿಕರ ಹೃದಯಾಂತರದಿಂಗ ಮೇಲೊಬ್ಬನಿದ್ದಾನೆ ಎಂಬ ಕರೆ ಮೊಳಗುವುದರಲ್ಲಿ ಸಂಶಯವಿಲ್ಲ. ■

*34 ನೇ ಪುಟದಿಂದ*

## ಸಹೋದರತೆಯ ಬೇಡಿಕೆಗಳು

ಕೂಡಾ ಸತ್ಕಾರ್ಯವೆನಿಸುತ್ತದೆ. ಆದರೆ ಈ ಹಂತದಲ್ಲಿ ಯಾವುದೇ ಕ್ಷೋಭೆ, ಗೊಂದಲ ಉಂಟಾಗದಂತೆ ಎಚ್ಚರವಹಿಸಬೇಕಾಗಿದೆ. ಅಲ್ಲಾಹನ ಸಂದೇಶವಾಹಕರು(ﷺ) ಇನ್ನೊಂದು ಹದೀಸಿನಲ್ಲಿ ಸಹೋದರತೆಯ ಬೇಡಿಕೆಗಳನ್ನು ಈ ರೀತಿ ಸ್ಪಷ್ಟಪಡಿಸಿರುತ್ತಾರೆ.

“ನೀವು ನಿಮ್ಮ ಸಹೋದರನಿಗೆ ಸಹಾಯ ಮಾಡಲೇಬೇಕು. ಅವನು ಅಕ್ರಮಿಯಾದರೂ ಅಕ್ರಮಕ್ಕೊಳಗಾದವನಾದರೂ ಸರಿ. ಅವನು ಅಕ್ರಮಿಯಾದರೆ ಅವನನ್ನು ಅಕ್ರಮದಿಂದ ತಡೆಯುವುದೇ ಅವನಿಗೆ ಮಾಡುವ ಸಹಾಯವಾಗುತ್ತದೆ. ಇನ್ನು ಅಕ್ರಮಕ್ಕೊಳಗಾ-ದವನಾಗಿದ್ದರೆ ಅವನೊಂದಿಗೆ ಸಹಕರಿಸುವುದಾಗಿದೆ.” (ಸಹೀಹ್ ಮುಸ್ಲಿಂ ಹದೀಸ್ ನಂ 2584)

ರೋಗ ಪೀಡಿತನಾದ ಮುಸ್ಲಿಂ ಸಹೋದರನನ್ನು ಸಂದರ್ಶಿಸುವುದು ಕೂಡಾ ಸಹೋದರತೆಯ ಬೇಡಿಕೆಗಳಲ್ಲಿ ಒಂದಾಗಿದೆ. ಚಿಕಿತ್ಸೆಗೆ ಅವನಲ್ಲಿ ಸಾಮರ್ಥ್ಯವಿಲ್ಲವೆಂದಾದರೆ ಅವನಿಗೆ ಚಿಕಿತ್ಸೆ ದೊರಕಿಸಿ ಕೊಡಬೇಕಾಗಿದೆ. ಅವನಿಗೆ ಉಡುಪು ಇಲ್ಲದಿದ್ದರೆ ಉಡುಪು ನೀಡುವುದು, ಆಹಾರವಿಲ್ಲದಿದ್ದರೆ ಆಹಾರ ಒದಗಿಸುವುದು, ಮಕ್ಕಳ ಶಿಕ್ಷಣಕ್ಕೆ ಸಹಕರಿಸುವುದು, ಒಂದೊಮ್ಮೆ ಅವನಿಗೆ ಪತ್ನಿ ಇಲ್ಲದಿದ್ದರೆ ಅವನಿಗೆ ಸಂಗಾತಿಯ ಏರ್ಪಾಡು ಮಾಡುವುದು ಕೂಡಾ ಇಸ್ಲಾಮಿ ಸಹೋದರತೆಯ ಬೇಡಿಕೆಯಾಗಿದೆ. ■

# ಜ್ಞಾನಿ ಮತ್ತು ಅಜ್ಞಾನಿ ಸರಿಸಮಾನರೇ?

ಪ್ರಯೋಜನಕಾರಿಯಾದ ಜ್ಞಾನ ಮತ್ತು ಅದರ ಹೆಚ್ಚಳಕ್ಕಾಗಿ ಸದಾ ಪ್ರಾರ್ಥಿಸುತ್ತಿರಬೇಕು.

ಜ್ಞಾನವು ಅತ್ಯಂತ ದೊಡ್ಡ ಬೆಳಕಾಗಿದೆ. ಪ್ರತಿಯೊಂದು ಮಾತು ಮತ್ತು ಕೃತಿಗೆ ಮೊದಲು ಜ್ಞಾನ ಪ್ರಧಾನವಾಗಿದೆ. ಜ್ಞಾನಿಗಳು ಮತ್ತು ಅಜ್ಞಾನಿಗಳು ಸಮಾನರಲ್ಲವೆಂದು ಪವಿತ್ರ ಕುರ್‌ಆನ್ ಹೇಳಿದೆ.

﴿قُلْ هَلْ يَسْتَوِى ٱلَّذِينَ يَعْلَمُونَ وَٱلَّذِينَ لَا يَعْلَمُونَ ۗ إِنَّمَا يَتَذَكَّرُ أُو۟لُوا۟ ٱلْأَلْبَـٰبِ ﴿٩﴾﴾

"ಜ್ಞಾನಿಗಳು ಮತ್ತು ಅಜ್ಞಾನಿಗಳು ಇವರಿಬ್ಬರು ಎಂದಾದರೂ ಸರಿಸಮಾನರಾಗಬಲ್ಲರೇ? ಎಂದು ಇವರೊಡನೆ ಕೇಳಿರಿ. ಬುದ್ಧಿಜೀವಿಗಳು ಮಾತ್ರ ಉಪದೇಶ ಪಡೆಯುತ್ತಾರೆ." (ಕುರ್‌ಆನ್ 39:9)

ಜ್ಞಾನಿಗಳು ಉಭಯ ಲೋಕಗಳಲ್ಲಿ ಅತ್ಯುನ್ನತ ಪದವಿಗೆ ತಲುಪುತ್ತಾರೆಂಬ ಸಂದೇಶ ಕುರ್‌ಆನಿನಲ್ಲಿದೆ.

﴿يَرْفَعِ ٱللَّهُ ٱلَّذِينَ ءَامَنُوا۟ مِنكُمْ وَٱلَّذِينَ أُوتُوا۟ ٱلْعِلْمَ دَرَجَـٰتٍ ۚ﴾

"ಸತ್ಯವಿಶ್ವಾಸವಿಳ್ಳವನಿಗೆ ಮತ್ತು ಜ್ಞಾನವು ನೀಡಲ್ಪಟ್ಟಿರುವವರಿಗೆ ಅಲ್ಲಾಹನು ಉನ್ನತ ಪದವಿಗಳನ್ನು ದಯಪಾಲಿಸುವನು." (ಕುರ್‌ಆನ್ 58:11)

ಧಾರ್ಮಿಕ ವಿಷಯಗಳಿಗೆ ಸಂಬಂಧಪಟ್ಟಂತೆ ಮೂಲಭೂತವಾಗಿ ಜ್ಞಾನವು ಬಹಳ ಪ್ರಮುಖ ಮತ್ತು ಮಹತ್ವಪೂರ್ಣವಾಗಿದೆ ಎನ್ನುವುದರಲ್ಲಿ ಸಂಶಯವಿಲ್ಲ. ಅದಕ್ಕೆ ಬೆನ್ನು ತಿರುಗಿಸುವುದು ಅಪಾಯದಲ್ಲಿ ಸಿಲುಕಿಸುವ ಕಾರ್ಯವಾಗಿದೆ.

ಅಲ್ಲಾಹನು ಹೇಳುತ್ತಾನೆ:

﴿فَأَعْرِضْ عَن مَّن تَوَلَّىٰ عَن ذِكْرِنَا وَلَمْ يُرِدْ إِلَّا ٱلْحَيَوٰةَ ٱلدُّنْيَا ﴿٢٩﴾ ذَٰلِكَ مَبْلَغُهُم مِّنَ ٱلْعِلْمِ ۚ إِنَّ رَبَّكَ هُوَ أَعْلَمُ بِمَن ضَلَّ عَن سَبِيلِهِۦ وَهُوَ أَعْلَمُ بِمَنِ ٱهْتَدَىٰ ﴿٣٠﴾﴾

"(ಪ್ರವಾದಿಯವರೇ) ನಮ್ಮ ಸ್ಮರಣೆಯಿಂದ ವಿಮುಖನಾಗುವವನನ್ನು ಹಾಗೂ ಲೌಕಿಕ ಜೀವನದ ಹೊರತು ಇನ್ನೇನನ್ನೂ ಬಯಸದವನನ್ನು ಅವನ ಪಾಡಿಗೆ ಬಿಟ್ಟುಬಿಡಿರಿ. ಇವರ ಜ್ಞಾನವಿಷ್ಟೆ. ಅವನ ಮಾರ್ಗದಿಂದ ಯಾರು ತಪ್ಪಿದ್ದಾನೆ ಮತ್ತು ಯಾರು ಸನ್ಮಾರ್ಗದಲ್ಲಿದ್ದಾನೆ ಎಂಬುದನ್ನು ನಿಮ್ಮ ಪ್ರಭುವೇ ಚೆನ್ನಾಗಿ ಬಲ್ಲನು." (ಕುರ್‌ಆನ್ 53:29-30)

ಆತ್ಮಾರ್ಥತೆ ಮತ್ತು ಶಿಸ್ತು ಯಾರಲ್ಲಿದೆಯೋ ಅವನು ಮಾತ್ರ ಚೆನ್ನಾಗಿ ಜ್ಞಾನ ಪಡೆಯುತ್ತಾನೆ. ಅದಕ್ಕಾಗಿ ಶಿಸ್ತುಬದ್ಧ ಅಧ್ಯಯನ ಕ್ರಮ ಹಾಗೂ ಶಿಷ್ಟಾಚಾರದ ಪಾಲನೆ ಅಗತ್ಯವಿದೆ. ಕರ್ಮವೆಸಗುವವನ ಸಂಕಲ್ಪಕ್ಕನುಸಾರ ಅದು ಸ್ವೀಕರಿಸಲ್ಪಡುವುದರಿಂದ ಜ್ಞಾನ ಪಡೆಯುವವನು ಅದಕ್ಕಾಗಿ ಅಲ್ಲಾಹನ ಬಳಿಯಲ್ಲಿರುವ ಪ್ರತಿಫಲದ

ನಿರೀಕ್ಷೆಯನ್ನಿಟ್ಟುಕೊಂಡಿರಬೇಕು.

ಲೌಕಿಕ ಲಾಭ ಮತ್ತು ಪ್ರಶಸ್ತಿಗಾಗಿ ಧಾರ್ಮಿಕ ಜ್ಞಾನ ಪಡೆಯುವವನು ಈ ಹದೀಸನ್ನು ಗಮನಿಸಬೇಕು.

"ಅಬೂಹುರೈರ(﵁) ಅವರಿಂದ ನಿವೇದನೆ: ಪ್ರವಾದಿ(ﷺ) ಯವರು ಹೇಳಿದರು: ಅಲ್ಲಾಹನ ಪಾವನ ಮುಖದ ದರ್ಶನವನ್ನು ಆಗ್ರಹಿಸಬೇಕಾದ ಒಂದು ಜ್ಞಾನದಿಂದ ಒಬ್ಬನು ಇಹಲೋಕದ ಯಾವುದಾದರೂ ಲಾಭವನ್ನು ಪಡೆಯಲು ಬಯಸಿದರೆ ಅಂತ್ಯದಿನದಲ್ಲಿ ಅವನು ಸ್ವರ್ಗದ ಪರಿಮಳವನ್ನು ಕೂಡಾ ಆಸ್ವದಿಸಲಾರ." (ಅಬೂದಾವೂದ್)

ಪ್ರಾರ್ಥನೆಯು ಕಲಿಯುವವನಿಗೆ ಶಕ್ತಿಯಾಗಿದೆ. ಪ್ರಯೋಜನಕಾರಿಯಾದ ಜ್ಞಾನ ಮತ್ತು ಅದರ ಹೆಚ್ಚಳಕ್ಕಾಗಿ ಸದಾ ಪ್ರಾರ್ಥಿಸುತ್ತಿರಬೇಕು. ಪ್ರವಾದಿ(ﷺ) ಯವರಿಗೆ ಅಲ್ಲಾಹನು ಆದೇಶಿಸಿರುವುದನ್ನು ನೋಡಿರಿ.




"ಓ ನನ್ನ ಪ್ರಭೂ! ನನಗೆ ಇನ್ನಷ್ಟು ಜ್ಞಾನವನ್ನು ದಯಪಾಲಿಸು." (20:114)

"ಓ ಅಲ್ಲಾಹನೇ! ನಾನು ನಿನ್ನೊಂದಿಗೆ ಪ್ರಯೋಜನಕಾರಿಯಾದ ಜ್ಞಾನ, ವಿಶಿಷ್ಟವಾದ ಆಹಾರ ಹಾಗೂ ಸ್ವೀಕರಿಸಲ್ಪಡುವ ಕರ್ಮಗಳನ್ನು ಯಾಚಿಸುತ್ತೇನೆ." (ಇಬ್ನ್ ಮಾಜ) ಎಂದು ಪ್ರಭಾತದಲ್ಲಿ ಪ್ರಾರ್ಥಿಸಬೇಕೆಂದು ಸತ್ಯವಿಶ್ವಾಸಿಗಳಿಗೆ ಆಜ್ಞಾಪಿಸಲಾಗಿದೆ.

ಕಲಿಯುವವರಲ್ಲಿ ಸದಾ ಅನುಮತಿಸಲ್ಪಟ್ಟಿರುವ ಸ್ಪರ್ಧಾಮನೋಭಾವ ನೆಲೆಗೊಳ್ಳಬೇಕಾಗಿದೆ. ಉನ್ನತ ಸ್ಥಾನಮಾನಗಳ ಆಸೆ, ಬೆಂಬಲಿಗರ ಹೆಚ್ಚಳದ ಬಯಕೆ, ಜನರ ಗೌರವದ ನಿರೀಕ್ಷೆ ಹಾಗೂ ಸಭೆಯಲ್ಲಿ ಚಪ್ಪಾಳೆಯ ಇರಾದೆಯನ್ನಿಟ್ಟುಕೊಂಡು ಜ್ಞಾನ ಸಂಪಾದಿಸುವುದು ಸರಿಯಲ್ಲ. ಅದು ಮನುಷ್ಯರಲ್ಲಿ ಜಂಭವನ್ನು ಹುಟ್ಟುಹಾಕಿ, ಇತರರನ್ನು ನಿಸ್ಸಾರಗೊಳಿಸಲು ಪ್ರೇರೇಪಿಸುತ್ತದೆ. ಈ ಕುರಿತು ಪ್ರವಾದಿ(ﷺ) ಯವರು ಎಚ್ಚರಿಕೆ ನೀಡಿರುವರು.

ಅಬೂಹುರೈರ(﵁) ಅವರಿಂದ ನಿವೇದನೆ. ಪ್ರವಾದಿ(ﷺ) ಯವರು ಹೇಳುತ್ತಾರೆ: "ಜ್ಞಾನ ಸಂಪಾದಿಸಿದ ಮತ್ತು ಅದನ್ನು ಇತರರಿಗೆ ಕಲಿಸಿದ ಹಾಗೂ ಕುರ್‌ಆನ್ ಪಾರಾಯಣ ಮಾಡುತ್ತಿದ್ದ ವ್ಯಕ್ತಿಯೊಬ್ಬನನ್ನು ಪುನರುತ್ಥಾನ ದಿನದಲ್ಲಿ ಅಲ್ಲಾಹನ ಮುಂದೆ ಹಾಜರುಪಡಿಸಲಾಗುತ್ತದೆ. ಆಗ ಅಲ್ಲಾಹನು ಅವನಿಗೆ ದಯಪಾಲಿಸಿದ ಅನುಗ್ರಹಗಳನ್ನು ತಿಳಿಸಿಕೊಟ್ಟ ನಂತರ ಕೇಳುತ್ತಾನೆ: ಅದರಿಂದ ನೀನು ಹೇಗೆ ಕಾರ್ಯವೆಸಗಿದೆ. ಅವನು ಹೇಳುವನು: ನಾನು ಜ್ಞಾನ ಸಂಪಾದಿಸಿ ಅದನ್ನು ಇತರರಿಗೆ ಕಲಿಸಿಕೊಟ್ಟಿದ್ದೇನೆ ಮತ್ತು ನಿನಗಾಗಿ ಕುರ್‌ಆನ್ ಪಾರಾಯಣ ಮಾಡಿದ್ದೇನೆ. ಆ ಸಂದರ್ಭ ಅಲ್ಲಾಹನು ಹೇಳುತ್ತಾನೆ. "ನೀನು ಸುಳ್ಳಾಡುತ್ತಿರುವಿ. ಏಕೆಂದರೆ ನೀನು ಜ್ಞಾನ ಸಂಪಾದಿಸಿರುವುದು ವಿದ್ವಾಂಸನೆಂದು ಕರೆಸಿಕೊಳ್ಳುವ ಉದ್ದೇಶದಿಂದಾಗಿದೆ ಮತ್ತು ನೀನು ಕುರ್‌ಆನ್ ಪಾರಾಯಣ ಮಾಡುತ್ತಿದ್ದುದು ಅತ್ಯುತ್ತಮ ಖಾರಿಯೆಂದು ಪ್ರಶಂಸಿಸಲ್ಪಡಲಿಕ್ಕಾಗಿದೆ. ನೀನು ಏನು ಬಯಸಿದ್ದೀಯೋ ಅದು ಈಗಾಗಲೇ ನಿನಗೆ ಲಭಿಸಿದೆ." ಆ ಬಳಿಕ ಅವನನ್ನು ಬೋರಲು ಮಲಗಿಸಿ ಎಳೆದುಕೊಂಡು ಹೋಗಿ ನರಕಕ್ಕೆ ಎಸೆದುಬಿಡಲು ಆದೇಶಿಸಲಾಗುವುದು. (ಮುಸ್ಲಿಮ್)

ಭಯಭಕ್ತಿ, ಶಿಸ್ತು, ಅನುಸರಣೆ, ನೈತಿಕಪ್ರಜ್ಞೆ ಮುಂತಾದವುಗಳು ಕಲಿಯುವವರು ಮೈಗೂಡಿಸಿಕೊಳ್ಳಬೇಕಾದ ಗುಣಗಳಾಗಿವೆ. ಆದರೆ, ಇಂದು ಇದೆಲ್ಲವನ್ನೂ ಮರೆಯಲಾಗುತ್ತಿದೆ. ಲೌಕಿಕ ಶಿಕ್ಷಣ ಕ್ಷೇತ್ರವಂತೂ ಹೊಲಸೆದ್ದು ನಾರುವಂತಾಗಿದೆ.

ಅಲ್ಲಾಹನು ಹೇಳುತ್ತಾನೆ:




"ವಾಸ್ತವದಲ್ಲಿ ಅಲ್ಲಾಹನ ದಾಸರಲ್ಲಿ ಜ್ಞಾನವುಳ್ಳವರು ಮಾತ್ರ ಅವನನ್ನು ಭಯಪಡುತ್ತಾರೆ. ನಿಶ್ಚಯವಾಗಿಯೂ ಅಲ್ಲಾಹನು ಪ್ರಬಲನೂ ಕ್ಷಮಾಶೀಲನೂ ಆಗಿದ್ದಾನೆ." (ಕುರ್‌ಆನ್ 35:28)

ಕಲಿಯುವಾಗ ಹೆಚ್ಚು ಜ್ಞಾನಿಗಳು, ಸಜ್ಜನರು ಮತ್ತು ಭಯಭಕ್ತಿಯಿರುವ ಗುರುಗಳನ್ನೇ ಆರಿಸಬಾಕು. ಅವರು ಹೇಳುವುದನ್ನು ಮನಸ್ಸಿಟ್ಟು ಆಲಿಸಿ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಯಾವುದರ ಕುರಿತು ಸ್ಪಷ್ಟತೆಯಿಲ್ಲವೋ ಅವುಗಳ ಕುರಿತು ಕೇಳಿ ತಿಳಿದುಕೊಳ್ಳಬೇಕು. ಅನಾವಶ್ಯಕ ಪ್ರಶ್ನೆಗಳನ್ನು ಕೇಳಬಾರದು. ಕಲಿಯುವ ಜಾಗ, ಪಠ್ಯಪುಸ್ತಕ, ಗ್ರಂಥಗಳನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕು. ಒಳಿತಿನಲ್ಲಿ ಪರಸ್ಪರ ಸಹಕರಿಸುವುದು, ಕೆಡುಕಿನಲ್ಲಿ ಸಹಕರಿಸದಿರುವ ಕುರ್‌ಆನಿನ ಸಂದೇಶ ಜೀವನದ ಭಾಗವಾಗಬೇಕು. ಅಲ್ಲಾಹನು ಅನುಗ್ರಹಿಸಲಿ. ■

# ವ್ಯಾಪಾರದಲ್ಲಿ ಅನುಗ್ರಹ

ವ್ಯಾಪಾರದಲ್ಲಿ ಪ್ರಾಮಾಣಿಕತೆಯನ್ನು ಕಾಯ್ದುಕೊಳ್ಳಬೇಕು. ಅಳತೆ ತೂಕಗಳಲ್ಲಿ ನ್ಯಾಯ ಪಾಲಿಸಬೇಕು. ಆಹಾರ ವಸ್ತುಗಳನ್ನು ದಾಸ್ತಾನಿಟ್ಟು ಕೃತಕ ಅಭಾವ ಸೃಷ್ಟಿಸಬಾರದು. ವಸ್ತುವಿನ ಕುಂದುಕೊರತೆಗಳನ್ನು ಮರೆಮಾಚಿ ಅದನ್ನು ಮಾರಾಟ ಮಾಡುವುದಕ್ಕೆ ಇಸ್ಲಾಮಿನಲ್ಲಿ ಅವಕಾಶವಿಲ್ಲ. ಕಲಬೆರಕೆ ನಿಷಿದ್ಧ. ಪ್ರಾಮಾಣಿಕತೆಯಿಂದ ವ್ಯಾಪಾರ ಮಾಡಿ ಪಡೆಯುವ ಲಾಭವನ್ನು ಪ್ರವಾದಿ(ﷺ) ಯವರು ಅತ್ಯುತ್ತಮ ಆದಾಯ ಎಂದು ಕರೆದಿರುವರು.

ಆದಿಮ ಕಾಲದಿಂದಲೇ ಮನುಷ್ಯನು ಕೃಷಿಯನ್ನು ಬಿಟ್ಟರೆ ವ್ಯಾಪಾರವನ್ನು ತನ್ನ ಜೀವನಮಾರ್ಗವಾಗಿ ಸ್ವೀಕರಿಸಿದ್ದಾನೆ. ಆದರೆ ಕಾಲಕ್ರಮೇಣ ವ್ಯಾಪಾರಿರಂಗದ ಒಳಿತು, ಪ್ರಾಮಾಣಿಕತೆ, ನಂಬಿಕೆ, ನಷ್ಟವಾಗಿ ವಂಚನೆ, ಮೋಸ, ಸುಳ್ಳು, ವ್ಯಾಪಾರದ ಹೆಗ್ಗುರುತಾಗಿ ಮಾರ್ಪಡುತ್ತಿದೆ.

ಕಾಲವು ಸರಿದಂತೆ ಮನುಷ್ಯನ ಉತ್ತಮ ಚಿಂತನೆಗೆ ಕೇಡುಂಟಾಗಿ ಅಲ್ಲಿ ದುರಾಸೆ, ಲೋಭ ಸ್ಥಾನ ಪಡೆದುಕೊಳ್ಳುತ್ತಿರುವುದು ದುಃಖದ ಸಂಗತಿಯಾಗಿದೆ. ವ್ಯಾಪಾರಿರಂಗವು ಜೀವನದ ಅವಶ್ಯಕತೆಗಳನ್ನು ನಿರ್ವಹಿಸಲಿಕ್ಕಿರುವ ಒಂದು ಉಪಾಧಿಗೆ ಬದಲಾಗಿ, ಇಂದು ಅದು ಅಲ್ಪಾವಧಿಯಲ್ಲಿ ಯಾವ ವಿಧದಲ್ಲಾದರೂ ಹೆಚ್ಚು ಹಣ ಮಾಡುವ ಸ್ಪರ್ಧಾಕಣವಾಗಿ ಮಾರ್ಪಟ್ಟಿರುವುದು ಸಮಸ್ಯೆಯ ಮೂಲವಾಗಿದೆ. ಇಂತಹ ಒಂದು ಸಮಾಜದಲ್ಲಿ ಗೌರವ, ಪ್ರಾಮಾಣಿಕತೆ ನಷ್ಟಪಡುತ್ತಿದೆ ಎಂಬುದರಲ್ಲಿ ಸಂಶಯವಿಲ್ಲ.

ವ್ಯಾಪಾರರಂಗದಲ್ಲಿ ಬ್ರಾಂಡಿಂಗ್ ಮತ್ತು ಮಾರ್ಕೆಟಿಂಗ್ ಪ್ರವೇಶಿಸುವುದರೊಂದಿಗೆ ಕೃತ್ರಿಮತೆ ಅದರ ಎಲ್ಲಾ ಮೇರೆಗಳನ್ನು ಮೀರಿಬಿಟ್ಟಿದೆ. ಅತ್ಯಧಿಕ ಲಾಭದ ದುರಾಸೆಯಿಂದ ಜನರು ಹಣ ಸಂಪಾದಿಸಲು ಯಾವ ನೀಚ ಮಾರ್ಗವನ್ನು ಕೂಡಾ ಸ್ವೀಕರಿಸಲು ಮುಂದಾಗುತ್ತಾರೆ.

ಇಂದು ಪ್ರತಿಯೊಂದು ಜೀವನಾವಶ್ಯಕ ವಸ್ತುಗಳಲ್ಲಿ ಕಲಬೆರಕೆ ನಡೆಯುತ್ತಿದೆ. ಕಲಬೆರಕೆಯಿಲ್ಲದೆ ಸಿಗುವ ವಸ್ತುಗಳು ಅಪರೂಪ. ಹಲವಾರು ಆಹಾರ ಸಾಮಾಗ್ರಿಗಳು ಬೇರೆ ಬೇರೆ ಬ್ರಾಂಡ್‌ನಲ್ಲಿ ಮಾರುಕಟ್ಟೆ ಪ್ರವೇಶಿಸುತ್ತಿದೆ. ಹೀಗೆ ಪ್ರವೇಶಿಸದ ಸಾಧನಗಳಲ್ಲಿ ಕಲಬೆರಕೆ ನಡೆದಿರುವುದು ದೃಢಪಟ್ಟರೆ ಜನರು ಅದನ್ನು ಖರೀದಿಸುವುದಿಲ್ಲ. ಆಗ ಸ್ವಾಭಾವಿಕವಾಗಿಯೇ ಅದರ ಬೇಡಿಕೆ ಕುಗ್ಗುತ್ತದೆ. ಈ ಸಂದರ್ಭದಲ್ಲಿ ಆ ಕಂಪೆನಿ ಅದೇ ವಸ್ತುವಿಗೆ ಬೇರೊಂದು ಲೇಬಲ್ ಅಂಟಿಸಿ ಮಾರುಕಟ್ಟೆಗೆ ಬಿಡುಗಡೆ ಮಾಡುವ ವಿರೋಧಾಭಾಸವೂ ನಡೆಯುತ್ತಿದೆ.

ಹಾರ್ಮೋನ್ ಇಂಜೆಕ್ಷನ್ ನೀಡುವ ಕೋಳಿಗಳ ಮಾಂಸ, ಮಾರಕ ರಾಸಾಯನಿಕಗಳನ್ನು ಬಳಸಿ ಬೆಳೆಸುವ ತರಕಾರಿ, ಹಣ್ಣುಹಂಪಲು ಹಾಗೂ ಅವುಗಳನ್ನು ಬೇಗ ಹಣ್ಣಾಗಿಸಲು ಉಪಯೋಗಿಸುವ ರಾಸಾಯನಿಕಗಳು, ಅಕ್ಕಿ, ಸಕ್ಕರೆ, ಗೋಧಿಯ ಪಾಲಿಶ್‌ಗಾಗಿ ಬಳಸಲ್ಪಡುವ ಅಪಾಯಕಾರಿ ಪದಾರ್ಥಗಳು... ಜನರ ಆರೋಗ್ಯ ಮತ್ತು ಕೊನೆಗೆ ಪ್ರಾಣಕ್ಕೂ ಸಂಚಕಾರ ತರುವ ಸಾಧ್ಯತೆ ಇದೆಯೆಂದು ವೈಜ್ಞಾನಿಕವಾಗಿಯೇ ದೃಢಪಟ್ಟಿದೆ.

ಈಗ ಮೀನುಗಳಲ್ಲಿ ಫಾರ್ಮಲಿನ್ ಪ್ರಯೋಗವು ಪ್ರಮುಖ ಸುದ್ದಿಯಾಗಿದೆ. ಅಮ್ಮೋನಿಯ ಪ್ರಯೋಗವು ಈ ಮೊದಲೇ ಚಾಲ್ತಿಯಲ್ಲಿತ್ತು.

*46 ನೇ ಪುಟಕ್ಕೆ*

# ಅಭಿಮಾನ ಭಂಗ

ಒಬ್ಬನ ಅಭಿಮಾನಕ್ಕೆ ಭಂಗ ತರಲು ಒಂದು ಮಾತು ಸಾಕಾಗುತ್ತದೆ. ಅದನ್ನು ಸಾಮಾಜಿಕ ಜಾಲತಾಣಗಳಲ್ಲಿ ಪೋಸ್ಟ್ ಮಾಡಿ ಬಿಟ್ಟರೆ ಕ್ಷಣಾರ್ಧದಲ್ಲಿ ಸಾವಿರಾರು ಜನರಿಗೆ ತಲುಪುತ್ತದೆ. ಆ ಸುದ್ದಿಯ ಸತ್ಯಾಸತ್ಯತೆಯನ್ನು ಪರಿಶೀಲಿಸದೆ ಸಿಕ್ಕಸಿಕ್ಕವರು ಶೇರ್ ಮಾಡಿಕೊಳ್ಳುತ್ತಾರೆ.

ಮಾಹಿತಿ ತಂತ್ರಜ್ಞಾನದ ಹೊಸ ಕಾಲಘಟ್ಟವು ಜನರಿಗೆ ಅನುಗ್ರಹವಾದಂತೆ, ಶಾಪವೂ ಆಗಿ ಪರಿಣಮಿಸುತ್ತಿದೆಯೋ ಎಂದು ಸಂಶಯಪಡಬೇಕಾಗಿದೆ. ಒಂದು ಸ್ಮಾರ್ಟ್ ಫೋನ್ ಮತ್ತು ಅದರಲ್ಲಿ ಇಂಟರ್ನೆಟ್ ಕನೆಕ್ಷನ್ ಇದ್ದರೆ ಯಾರ ಕುರಿತು ಏನನ್ನೂ ಹೇಳಬಹುದು, ತನಗಿಷ್ಟವಿಲ್ಲದವರ ಅಭಿಮಾನವನ್ನು ಘಾಸಿಗೊಳಿಸಬಹುದು ಎಂಬಂತಹ ಪರಿಸ್ಥಿತಿ ನೆಲೆಗೊಂಡಿದೆ.

ಇಸ್ಲಾಮ್ ಪ್ರತಿಯೊಬ್ಬ ವ್ಯಕ್ತಿಯ ಅಭಿಮಾನ ಸಂರಕ್ಷಿಸಲ್ಪಡಬೇಕಾಗಿದೆ ಎಂದು ಹೇಳುತ್ತದೆ. ಪ್ರವಾದಿ ಮುಹಮ್ಮದ್(ﷺ) ತಮ್ಮ ವಿದಾಯ ಭಾಷಣದಲ್ಲಿ ಹಜ್ ಯಾತ್ರಿಕರನ್ನುದ್ದೇಶಿಸಿ ಹೇಳುತ್ತಾರೆ:

“ಓ ಜನರೇ! ನಿಮ್ಮ ಪ್ರಾಣ, ಸಂಪತ್ತು ಮತ್ತು ಅಭಿಮಾನ ಈ ಸುದಿನ, ಈ ತಿಂಗಳು ಹಾಗೂ ಈ ಸ್ಥಳದಂತೆ ಪವಿತ್ರವಾಗಿದೆ.”

ಪವಿತ್ರ ಕುರ್‌ಆನ್ ಹೇಳುತ್ತದೆ:

﴿ يَٰٓأَيُّهَا ٱلَّذِينَ ءَامَنُواْ لَا يَسۡخَرۡ قَوۡمٞ مِّن قَوۡمٍ عَسَىٰٓ أَن
يَكُونُواْ خَيۡرٗا مِّنۡهُمۡ وَلَا نِسَآءٞ مِّن نِّسَآءٍ عَسَىٰٓ أَن يَكُنَّ خَيۡرٗا
مِّنۡهُنَّۖ وَلَا تَلۡمِزُوٓاْ أَنفُسَكُمۡ وَلَا تَنَابَزُواْ بِٱلۡأَلۡقَٰبِۖ بِئۡسَ
ٱلِٱسۡمُ ٱلۡفُسُوقُ بَعۡدَ ٱلۡإِيمَٰنِۚ وَمَن لَّمۡ يَتُبۡ فَأُوْلَٰٓئِكَ هُمُ
ٱلظَّٰلِمُونَ ١١ يَٰٓأَيُّهَا ٱلَّذِينَ ءَامَنُواْ ٱجۡتَنِبُواْ كَثِيرٗا مِّنَ ٱلظَّنِّ
إِنَّ بَعۡضَ ٱلظَّنِّ إِثۡمٞۖ وَلَا تَجَسَّسُواْ وَلَا يَغۡتَب بَّعۡضُكُم
بَعۡضًاۚ أَيُحِبُّ أَحَدُكُمۡ أَن يَأۡكُلَ لَحۡمَ أَخِيهِ
مَيۡتٗا فَكَرِهۡتُمُوهُۚ وَٱتَّقُواْ ٱللَّهَۚ إِنَّ ٱللَّهَ تَوَّابٞ رَّحِيمٞ ١٢ ﴾

“ಸತ್ಯವಿಶ್ವಾಸಿಗಳೇ! ಪುರುಷರು ಇತರ ಪುರುಷರನ್ನು ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು. ಸ್ತ್ರೀಯರು ಇತರ ಸ್ತ್ರೀಯರನ್ನು ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು. ಪರಸ್ಪರರನ್ನು ನಿಂದಿಸಬೇಡಿರಿ. ಒಬ್ಬರು ಇನ್ನೊಬ್ಬರನ್ನು ಅಡ್ಡ ಹೆಸರಿನಿಂದ ಕರೆಯಬೇಡಿರಿ. ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕ ಕರ್ಮಭ್ರಷ್ಟತೆಯಲ್ಲಿ ಹೆಸರು ಗಳಿಸುವುದು ಬಹಳ ಕೆಟ್ಟದು. ಈ ನಿಲುಮೆಯನ್ನು ತೊರೆಯದವರು ಅಕ್ರಮಿಗಳಾಗಿರುವರು. ಸತ್ಯವಿಶ್ವಾಸಿಗಳೇ! ಹೆಚ್ಚಿನ ಗುಮಾನಿಗಳಿಂದ ದೂರವಿರಿ. ನಿಶ್ಚಯವಾಗಿಯೂ ಕೆಲವು ಗುಮಾನಿಗಳು ಪಾಪವಾಗಿದೆ. ದೋಷಾನ್ವೇಷಣೆ ಮಾಡದಿರಿ. ನಿಮ್ಮಲ್ಲಿ ಯಾರೂ ಯಾರ ಬಗ್ಗೆಯೂ ಪರದೂಷಣೆ ಮಾಡಬಾರದು. ನಿಮ್ಮಲ್ಲಿ ಯಾರಾದರೂ ತನ್ನ ಮೃತ ಸಹೋದರನ ಮಾಂಸ ತಿನ್ನುವುದನ್ನು ಇಷ್ಟಪಡುವನೇ? ನೀವು ಸ್ವತಃ ಇದನ್ನು ಅಸಹ್ಯಪಡುತ್ತೀರಿ. ಅಲ್ಲಾಹನನ್ನು ಭಯಪಡಿರಿ. ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ.” (49:11-12)

ಖಲೀಫ ಉಮರ್(ؓ) ತಮ್ಮ ವಿಶಾಲ ಸಾಮ್ರಾಜ್ಯದ ವಿವಿಧ ಪ್ರದೇಶಗಳಿಗೆ ರಾಯಭಾರಿಗಳನ್ನು ನೇಮಿಸುವಾಗ ಹೀಗೆ ಉಪದೇಶಿಸುತ್ತಿದ್ದರು. "ನಾನು ನಿಮ್ಮನ್ನು ಜನರೆಡೆಗೆ ನಿಯೋಗಿಸುತ್ತಿರುವುದು ಅಕ್ರಮಿಗಳು ಮತ್ತು ಮರ್ದಕರಾಗಿಯಲ್ಲ. ನೀವು ಜನರನ್ನು ಮರ್ದನಕ್ಕೊಳಪಡಿಸುವುದರಿಂದ ಮತ್ತು ಅವರ ಅಭಿಮಾನವನ್ನು ಘಾಸಿಗೊಳಿಸುವುದರ ಕುರಿತು ಜಾಗರೂಕರಾಗಿರಿ."

ಒಬ್ಬನ ಅಭಿಮಾನಕ್ಕೆ ಭಂಗ ತರಲು ಒಂದು ಮಾತು ಸಾಕಾಗುತ್ತದೆ. ಅದನ್ನು ಸಾಮಾಜಿಕ ಜಾಲತಾಣಗಳಲ್ಲಿ ಪೋಸ್ಟ್ ಮಾಡಿ ಬಿಟ್ಟರೆ ಕ್ಷಣಾರ್ಧದಲ್ಲಿ ಸಾವಿರಾರು ಜನರಿಗೆ ತಲುಪುತ್ತದೆ. ಆ ಸುದ್ದಿಯ ಸತ್ಯಾಸತ್ಯತೆಯನ್ನು ಪರಿಶೀಲಿಸದೆ ಸಿಕ್ಕಸಿಕ್ಕವರು ಶೇರ್ ಮಾಡಿಕೊಳ್ಳುತ್ತಾರೆ.

ಕಳೆದು ಹೋದ ಅಭಿಮಾನವನ್ನು ಮರಳಿ ಪಡೆಯುವುದು ದುಷ್ಕರವಾಗಿದೆ. ಯಾವುದಾದರೊಂದು ಲೌಕಿಕ ಲಾಭಕ್ಕಾಗಿ ಅಥವಾ ವೈಯಕ್ತಿಕ ದ್ವೇಷದ ಹೆಸರಲ್ಲಿ ಇತರರ ಅಭಿಮಾನಕ್ಕೆ ಹಾನಿ ಉಂಟು ಮಾಡಲು ಟೊಂಕಕಟ್ಟಿ ನಿಂತವರು ಎಲ್ಲಾ ಕಡೆಗಳಲ್ಲಿದ್ದಾರೆ.

ಅಂತಹವರು ಪ್ರವಾದಿ(ﷺ) ಯವರ ಈ ವಚನವನ್ನು ಗಮನಿಸಲಿ.

ಅಬೂ ಹುರೈರ(ؓ) ಅವರಿಂದ ನಿವೇದನೆ. ಪ್ರವಾದಿ(ﷺ) ಯವರು ಹೇಳಿದರು: "ಒಬ್ಬನು ಬೇರೊಬ್ಬನ ಅಭಿಮಾನಕ್ಕೆ ಭಂಗ ತಂದಿದ್ದರೆ ಅವನು ದೀನಾರ್ ಮತ್ತು ದಿರ್ಹಮ್ ಯಾವ ಪ್ರಯೋಜನಕ್ಕೂ ಬರದ ಆ ದಿನವು ಬರುವುದಕ್ಕಿಂತ ಮೊದಲು ಈ ಲೋಕದಲ್ಲಿಯೇ ಸಂಬಂಧಪಟ್ಟವನೊಂದಿಗೆ ಕ್ಷಮೆಯಾಚಿಸಿ ತನ್ನ ಪಾಪದಿಂದ ಮುಕ್ತನಾಗಲಿ. ಅನ್ಯಥಾ ಅಂತ್ಯದಿನದಂದು ಅವನ ಸತ್ಕರ್ಮಗಳು ಅಕ್ರಮಿಸಲ್ಪಟ್ಟವನ ಖಾತೆಗೆ ಜಮೆಯಾಗುತ್ತದೆ. ಅಕ್ರಮಿಯ ಬಳಿಯಲ್ಲಿ ಸತ್ಕರ್ಮಗಳೇನೂ ಉಳಿದಿರದಿದ್ದರೆ ಅಕ್ರಮಿಸಲ್ಪಟ್ಟವನ ಪಾಪಗಳನ್ನು ಅಕ್ರಮಿಯ ಖಾತೆಗೆ ಜಮೆ ಮಾಡಿಕೊಳ್ಳಲಾಗುವುದು." (ಬುಖಾರಿ)

ನಮ್ಮಿಂದಾಗಿ ಒಬ್ಬನ ಅಭಿಮಾನಕ್ಕೆ ಘಾಸಿಯಾಗಿದ್ದರೆ ಖುದ್ದಾಗಿ ಅವನೊಂದಿಗೆ ಕ್ಷಮೆಯಾಚಿಸಬೇಕು. ಹಾಗೆ ಮಾಡದಿದ್ದರೆ ಏನು ಸಂಭವಿಸುತ್ತದೆಯೆಂದು ಮೇಲೆ ಉಲ್ಲೇಖಿಸಿದ ಪ್ರವಾದಿ(ﷺ) ಯವರ ಎಚ್ಚರಿಕೆಯಿಂದ ಸ್ಪಷ್ಟವಿದೆ. ■

---

*44 ನೇ ಪುಟದಿಂದ*

## ವ್ಯಾಪಾರದಲ್ಲಿ ಅನುಗ್ರಹ

ಲೋಕದ ಹಲವಾರು ರಾಷ್ಟ್ರಗಳು ಆಹಾರವಸ್ತುಗಳನ್ನು ರಫ್ತು ಮಾಡುತ್ತಿದೆ. ಪ್ರತಿಯೊಂದು ರಾಷ್ಟ್ರಗಳು ತಮ್ಮ ರಾಷ್ಟ್ರದ ಪ್ರಜೆಗಳ ಆರೋಗ್ಯವನ್ನು ಖಾತರಿಪಡಿಸಿಕೊಳ್ಳಲು ಅಗತ್ಯ ಮುನ್ನೆಚ್ಚರಿಕೆಯ ಕ್ರಮಗಳನ್ನು ತೆಗೆದುಕೊಳ್ಳುತ್ತಿದೆ. ಇದಕ್ಕಾಗಿ ಆಧುನಿಕ ವೈಜ್ಞಾನಿಕ ತಂತ್ರಜ್ಞಾನವನ್ನೂ ಬಳಸಿಕೊಳ್ಳುತ್ತಿದೆ. ಆದರೆ ನಮ್ಮ ರಾಷ್ಟ್ರದಲ್ಲಿ ಮಾತ್ರ ಸಮಾಜದ್ರೋಹಿಗಳು ಯಾವ ಭಯವೂ ಇಲ್ಲದೆ ತಮ್ಮ ಕಾರ್ಯವನ್ನು ನಿರಾತಂಕವಾಗಿ ಮುಂದುವರಿಸುತ್ತಾರೆ. ರಾಜಕಾರಣಿಗಳು ಮತ್ತು ಬಂಡವಾಳಶಾಹಿಗಳ ನಡುವಿನ ಅಪವಿತ್ರ ಮೈತ್ರಿಯೇ ಇದಕ್ಕೆ ಕಾರಣವಾಗಿದೆ.

ಮುಸ್ಲಿಮರು ಈ ವಿಷಯದಲ್ಲಿ ಗಂಭೀರವಾಗಿ ಪರಿಗಣಿಸಬೇಕಾದ ಕೆಲವು ಕಾರ್ಯಗಳಿವೆ. ಇಸ್ಲಾಮ್ ವ್ಯಾಪಾರವನ್ನು ತುಂಬಾ ಪ್ರೋತ್ಸಾಹಿಸಿದ ಧರ್ಮವಾಗಿದೆ. ಇದು ವ್ಯಾಪಾರದಲ್ಲಿ ಲಾಭವನ್ನು ನಿರೀಕ್ಷಿಸಿದ ಕಡೆಗಳಲ್ಲಿ ದೈವಾನುಗ್ರಹವನ್ನು ಪ್ರಸ್ತಾಪಿಸಿದ ಆದರ್ಶವಾಗಿದೆ. ಮುಸ್ಲಿಮರು ಇಸ್ಲಾಮ್ ನಿರ್ದೇಶಿಸಿದ ಪ್ರಕಾರ ವ್ಯಾಪಾರದಲ್ಲಿ ತೊಡಗಿಕೊಂಡರೆ ಒಂದು ಮಾದರಿಯಾದ ಮಾರುಕಟ್ಟೆಯನ್ನು ಅಸ್ತಿತ್ವಕ್ಕೆ ತರಬಹುದಾಗಿದೆ. ವ್ಯಾಪಾರಿರಂಗದ ಒಳಿತು ಪರಲೋಕದ ಒಳಿತಿನೊಂದಿಗೆ ತಳಕುಹಾಕಲ್ಪಟ್ಟಿದೆ ಎನ್ನುವುದನ್ನು ಮರೆಯುವಂತಿಲ್ಲ.




"ಓ ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ ಮತ್ತು ಸತ್ಯಸಂಧರ ಜೊತೆಗಿರಿ." (9:119)

ವ್ಯಾಪಾರದಲ್ಲಿ ಪ್ರಾಮಾಣಿಕತೆಯನ್ನು ಕಾಯ್ದುಕೊಳ್ಳಬೇಕು. ಅಳತೆ ತೂಕಗಳಲ್ಲಿ ನ್ಯಾಯ ಪಾಲಿಸಬೇಕು. ಆಹಾರ ವಸ್ತುಗಳನ್ನು ದಾಸ್ತಾನಿಟ್ಟು ಕೃತಕ ಅಭಾವ ಸೃಷ್ಟಿಸಬಾರದು. ವಸ್ತುವಿನ ಕುಂದು-ಕೊರತೆಗಳನ್ನು ಮರೆಮಾಚಿ ಅದನ್ನು ಮಾರಾಟ ಮಾಡುವುದಕ್ಕೆ ಇಸ್ಲಾಮಿನಲ್ಲಿ ಅವಕಾಶವಿಲ್ಲ. ಕಲಬೆರಕೆ ನಿಷಿದ್ಧ. ಪ್ರಾಮಾಣಿಕತೆಯಿಂದ ವ್ಯಾಪಾರ ಮಾಡಿ ಪಡೆಯುವ ಲಾಭವನ್ನು ಪ್ರವಾದಿ(ﷺ) ಯವರು ಅತ್ಯುತ್ತಮ ಆದಾಯ ಎಂದು ಕರೆದಿರುವರು. ಸತ್ಯಸಂಧ ವ್ಯಾಪಾರಿ ಪರಲೋಕದಲ್ಲಿ ಪ್ರವಾದಿಗಳು ಮತ್ತು ಹುತಾತ್ಮರ ಜೊತೆಗಿರುವನು. ಪ್ರವಾದಿ(ﷺ) ಯವರು ಅಂತಹವರಿಗೆ ಅಲ್ಲಾಹನ ನೆರಳು ಲಭಿಸುವುದೆಂದು ಹೇಳಿದ್ದಾರೆ. ಪ್ರಾಮಾಣಿಕವಾದ ವ್ಯಾಪಾರದಲ್ಲಿ ಅಲ್ಲಾಹನ ಅನುಗ್ರಹವಿದೆ. ಇಂತಹ ವ್ಯಾಪಾರ ಧರ್ಮಬದ್ಧವಾಗಿದೆ. ■




# ಉಮ್ಮು ಕುಲ್ಸೂಮ್ ಬಿಂತಿ ಉಕ್ಬ(رضي الله عنها)

ಉಮ್ಮು ಕುಲ್ಸೂಮ್(رضي الله عنها) ಬಹಳ ಘನತೆ ಮತ್ತು ಗಂಭೀರ ಸ್ವಭಾವದ ವನಿತೆಯಾಗಿದ್ದರು. ಇವರಿಂದ ಹಲವಾರು ಪ್ರತಿಷ್ಠಿತರು ಹದೀಸ್‌ಗಳನ್ನು ಉಲ್ಲೇಖಿಸಿರುತ್ತಾರೆ. ಅವರ ಪೈಕಿ ಹುಮೈದ್ ಬಿನ್ ಅಬ್ದುರ್ರಹ್ಮಾನ್, ಹುಮೈದ್ ಬಿನ್ ನಾಫಿಅ್ ಮತ್ತು ಇಬ್ರಾಹೀಮ್ ಬಿನ್ ಅಬ್ದುರ್ರಹ್ಮಾನ್ ಪ್ರಮುಖರು. ಸಹೀಹ್ ಬುಖಾರಿ, ಸಹೀಹ್ ಮುಸ್ಲಿಂ, ಅಬೂದಾವೂದ್, ನಸಾಈ ಮತ್ತು ಇಬ್ನ್ ಮಾಜ ಮುಂತಾದ ಹದೀಸ್ ಗ್ರಂಥಗಳಲ್ಲಿ ಇವರ ವರದಿಗಳು ಉಲ್ಲೇಖಗೊಂಡಿದೆ.

ಇವರ ನಿಜನಾಮವೇನೆಂದು ತಿಳಿದು ಬರುವುದಿಲ್ಲ. ಇವರ ವಂಶಪಾರಂಪರ್ಯವು ಈ ರೀತಿ ಇದೆ. ಉಮ್ಮು ಕುಲ್ಸೂಮ್ ಬಿಂತಿ ಉಕ್ಬ ಬಿನ್ ಅಬೂ ಮುಈತ್ ಬಿನ್ ಅಬೂ ಅಮ್ರೂ ಬಿನ್ ಉಮಯ್ಯ ಬಿನ್ ಅಬ್ದುಶ್ಶಮ್ಸ್ ಬಿನ್ ಅಬ್ದು ಮನಾಫ್. ತಾಯಿಯ ಹೆಸರು ಉರ್ವಾ ಬಿಂತಿ ಕರೀಝ್ ಎಂದಾಗಿತ್ತು. ಉಸ್ಮಾನ್ (رضي الله عنه) ಮತ್ತು ಉಮ್ಮು ಕುಲ್ಸೂಮ್(رضي الله عنها) ರವರು ಇಬ್ಬರೂ ಒಂದೇ ತಾಯಿ ಆದರೆ ಬೇರೆ ಬೇರೆ ತಂದೆಯರಿಗೆ ಜನಿಸಿದ ಸಹೋದರ ಸಹೋದರಿಯಾಗಿದ್ದಾರೆ.

ಉಮ್ಮು ಕುಲ್ಸೂಮ್ ರವರ ತಂದೆ ಉಕ್ಬ ಬಿನ್ ಅಬೂ ಮುಈತ್ ಬನೂ ಉಮಯ್ಯ ಗೋತ್ರದ ಪ್ರಮುಖ ವ್ಯಕ್ತಿಗಳಲ್ಲಿ ಓರ್ವರಾಗಿ-ದ್ದರು. ಇವರಿಗೆ ಇಸ್ಲಾಮ್ ಮತ್ತು ಮುಸ್ಲಿಮರ ಬಗ್ಗೆ ವಿರೋಧ ಮತ್ತು ದ್ವೇಷವಿತ್ತು. ಅವರು ತನ್ನ ಮಗಳು ಇಸ್ಲಾಮ್ ಸ್ವೀಕರಿಸಿ ಅಥವಾ ಮುಸಲ್ಮಾನರೊಂದಿಗೆ ಸಂಬಂಧ ಕುದುರಿಸಿಕೊಂಡು ಪ್ರತಿಷ್ಠಿತ ಮಕ್ಕಾ ನಿವಾಸಿಗಳ ಮುಂದೆ ತನ್ನ ಮುಖಕ್ಕೆ ಕೆಸರು ಹಚ್ಚಬಹುದೆಂಬ ಭಾವನೆಯೇ ಇರಲಿಲ್ಲ. ಆದರೆ ಅಲ್ಲಾಹು ಇದನ್ನೇ ಉದ್ದೇಶಿಸಿದ್ದ. ಅತ್ತ ಆ ತಂದೆ ಮುಸ್ಲಿಮರು ಮತ್ತು ಇಸ್ಲಾಮಿನ ಸಂದೇಶವಾಹಕರ ವಿರುದ್ಧ ಪ್ರವರ್ತನೆಯಲ್ಲಿ ನಿಭಿಡನಾಗಿದ್ದರೆ ಇತ್ತ ಅವನ ಪುತ್ರಿಯ ಮೂಲಕ ಇಸ್ಲಾಮಿನ ಜ್ಯೋತಿಯು ಅವರ ಮನೆಯಲ್ಲೇ ಪ್ರಶೋಭಿಸತೊಡ-ಗಿತ್ತು. ಅವರ ಪುತ್ರಿ ಉಮ್ಮು ಕುಲ್ಸೂಮ್ ತನ್ನ ನಾಲ್ಕೂ ದಿಕ್ಕುಗಳಲ್ಲಿ ಆವರಿಸಿರುವ ಶಿರ್ಕ್‌ನ ಕಾರ್ಗತ್ತಲಿನಿಂದ ಹೊರಬಂದು ಇಸ್ಲಾಮಿನ ಹೊಂಬೆಳಕನ್ನು ಆಸ್ವದಿಸುತ್ತಿದ್ದರು.

ಹುದೈಬಿಯಾದಲ್ಲಿ ಮಕ್ಕಾದ ಕುರೈಶರೊಂದಿಗೆ ಮಾಡಲಾದ ಕರಾರಿನಲ್ಲಿ ಮಕ್ಕಾದಿಂದ ಯಾರಾದರೂ ಇಸ್ಲಾಮ್ ಸ್ವೀಕರಿಸಿಕೊಂಡು ಮದೀನಕ್ಕೆ ಬಂದರೆ ಅವರನ್ನು ಮಕ್ಕಾದವರಿಗೆ ಹಸ್ತಾಂತರಿಸಲಾ-ಗುವುದೆಂಬ ಶರತ್ತು ಒಳಗೊಂಡಿತ್ತು. ಈ ಶರತ್ತಿನಿಂದ ಬಹಳ ಸಂಕಷ್ಟಕ್ಕೆ ಸಿಲುಕಿದ ಮಹಿಳೆಯಾಗಿದ್ದರು ಉಮ್ಮು ಕುಲ್ಸೂಮ್. ಏಕೆಂದರೆ ಅವರು ಹುದೈಬಿಯಾ ಸಂಧಿಯ ನಂತರ ಮಕ್ಕಾ ದಿಂದ ಮದೀನಕ್ಕೆ ಹಿಜ್ರಾ ಮಾಡಿ ಬಿಂದಿದ್ದರು. ಅದು ಕೂಡಾ ಬಹಳ ಕಷ್ಟ ಮತ್ತು ಸಮಸ್ಯೆಯನ್ನು ಎದುರಿಸಿಕೊಂಡು ಬಂದಿದ್ದಾಗಿತ್ತು.

ಇವರು ಬನೂ ಕಝೂಅದ ಓರ್ವ ವ್ಯಕ್ತಿಯೊಂದಿಗೆ ತನ್ನ ಮನೆ ಮತ್ತು ಕುಟುಂಬದವರಿಂದ ತಪ್ಪಿಸಿಕೊಂಡು ಗುಪ್ತವಾಗಿ ಪಲಾಯನ ಮಾಡಿಕೊಂಡು ಮದೀನದ ಕಡೆಗೆ ಹೊರಟಿದ್ದರು. ವಿಷಯವು ಮನೆಯವರಿಗೆ ತಿಳಿಯಿತು. ಇವರ ಸಹೋದರರಾದ ವಲೀದ್

ಮತ್ತು ಅಮ್ಮಾರ ತಮ್ಮ ಸಹೋದರಿಯನ್ನು ಹಿಂಬಾಲಿಸುತ್ತಾ ಹೊರಟರು. ಉಮ್ಮು ಕುಲ್ಸೂಮ್ ಮದೀನಕ್ಕೆ ತಲುಪಿದ ಎರಡು ದಿನಗಳ ನಂತರ ಅವರೂ ಮದೀನ ತಲುಪಿದರು. ಹುದೈಬಿಯಾದಲ್ಲಿ ನಡೆದ ಸಂಧಿಯ ಪ್ರಕಾರ ಉಮ್ಮು ಕುಲ್ಸೂಮ್‌ರನ್ನು ನಮ್ಮ ಜೊತೆ ಕಳುಹಿಸಿಕೊಡಬೇಕೆಂದು ಅವರು ಪ್ರವಾದಿ(ﷺ) ಯವರ ಮುಂದೆ ಪ್ರಸ್ತಾಪವನ್ನಿಟ್ಟಿದ್ದರು.

ಇನ್ನೊಂದು ಕಡೆ ಉಮ್ಮು ಕುಲ್ಸೂಮ್(ರ) "ನಾನು ದುರ್ಬಲೆಯಾದ ಓರ್ವ ಮಹಿಳೆ. ಆತ್ಮಾರ್ಥವಾಗಿ ಇಸ್ಲಾಮ್ ಸ್ವೀಕರಿಸಿಕೊಂಡು ಬಂದಿದ್ದೇನೆ. ಇನ್ನು ಇಸ್ಲಾಮೇ ನನ್ನ ಸರ್ವಸ್ವ. ನಾನು ಯಾವ ಕಾರಣಕ್ಕೂ ಇಸ್ಲಾಮನ್ನು ತೊರೆಯುವುದಾಗಲೀ, ಮಕ್ಕಾಕ್ಕೆ ಮರಳಿ ಸತ್ಯನಿಷೇಧಿಗಳ ಅಕ್ರಮಕ್ಕೆ ತುತ್ತಾಗುವುದಾಗಲೀ ಮಾಡಲಾರೆ. ನಾನು ಮಹಿಳೆಯಾದ್ದಿಂದ ಪ್ರಾಕೃತಿಕವಾಗಿ ನಾನು ತುಂಬಾ ದುರ್ಬಲೆಯಾಗಿದ್ದು ಜನರ ಹಲವು ರೀತಿಯ ಕಿರುಕುಳ ಮತ್ತು ಅನ್ಯಾಯ--ಅಕ್ರಮಗಳನ್ನು ಸಹಿಸಬೇಕಾಗಿದೆ.

ನಾನೇನಾದರೂ ಮರಳಿದರೆ ಖಂಡಿತ ಇವರು ನನ್ನನ್ನು ಕಿತ್ತು ತಿನ್ನುವರು. ನನ್ನನ್ನು ದೈಹಿಕವಾಗಿ-ಮಾನಸಿಕವಾಗಿ ಹಿಂಸಿಸಿ ನನ್ನಿಂದ ಈ ಸತ್ಯಧರ್ಮವನ್ನು ಕಿತ್ತುಕೊಳ್ಳುವರು. ಆದ್ದರಿಂದ ನನ್ನ ಮೇಲೆ ಕರುಣೆ ತೋರಿರಿ. ನನ್ನ ಮಾನ ಮತ್ತು ಪ್ರಾಣವನ್ನು ಕಾಪಾಡಿರಿ. ನನ್ನ ಧರ್ಮ ಅನುಸರಿಸಿಕೊಂಡು ಜೀವಿಸಲು ನನಗೆ ಅವಕಾಶ ಕಲ್ಪಿಸಿಕೊಡಿರಿ. ಯಾವ ಕಾರಣಕ್ಕೂ ನನ್ನನ್ನು ಮಕ್ಕಾದ ಕುಫ್ಫಾರರ ವಶಕ್ಕೆ ನೀಡಬೇಡಿರಿ."

ಉಮ್ಮು ಕುಲ್ಸೂಮ್ ಮತ್ತು ಹುದೈಬಿಯಾ ಸಂಧಿಯ ಶರತ್ತನ್ನು ಪರಿಗಣಿಸಿಕೊಂಡು ಪ್ರವಾದಿ(ﷺ) ಯವರು ತುಂಬಾ ಚಿಂತಿತರಾದರು. ಬಹಳ ಆಲೋಚಿಸಿದ ನಂತರ ಸಂಧಿಯ ಶರತ್ತುಗಳಲ್ಲಿ ಸ್ತ್ರೀಯರಿಗೆ ಸಂಬಂಧಿಸಿದ ಉಲ್ಲೇಖವಿಲ್ಲ ಎನ್ನುವುದನ್ನು ಮನಗಂಡರು. ಈ ಕುರಿತಾಗಿ ಅಲ್ಲಾಹನ ವತಿಯಿಂದ ಸೂರ ಮುಮ್ತಹಿನದ ಈ ಕೆಳಗಿನ ವಚನವೂ ಅವತೀರ್ಣವಾಯಿತು.

﴿ يَـٰٓأَيُّهَا ٱلَّذِينَ ءَامَنُوٓا۟ إِذَا جَآءَكُمُ ٱلْمُؤْمِنَـٰتُ
مُهَـٰجِرَٰتٍ فَٱمْتَحِنُوهُنَّ ۖ ٱللَّهُ أَعْلَمُ بِإِيمَـٰنِهِنَّ ۖ فَإِنْ
عَلِمْتُمُوهُنَّ مُؤْمِنَـٰتٍ فَلَا تَرْجِعُوهُنَّ إِلَى ٱلْكُفَّارِ ۖ ﴾

"ಓ ಸತ್ಯವಿಶ್ವಾಸಿಗಳೇ, ನಿಮ್ಮ ಬಳಿಗೆ ಮುಸ್ಲಿಮ್ ಸ್ತ್ರೀಯರು ಹಿಜ್ರಾ ಮಾಡಿಕೊಂಡು ಬಂದರೆ ಅವರನ್ನು ಪರೀಕ್ಷಿಸಿಕೊಳ್ಳಿರಿ. ಅಲ್ಲಾಹು ಅವರ ವಿಶ್ವಾಸವನ್ನು ಚೆನ್ನಾಗಿ ಅರಿಯುತ್ತಾನೆ. ಅವರು ಮುಸಲ್ಮಾನರೆಂದು ನಿಮಗೆ ದೃಢವಾದರೆ ಇಂತಹ ಸ್ತ್ರೀಯರನ್ನು ಸತ್ಯನಿಷೇಧಿಗಳ ವಶಕ್ಕೆ ಒಪ್ಪಿಸಬೇಡಿರಿ." (ಸೂರ ಮುಮ್ತಹಿನ 10)

ಉಮ್ಮು ಕುಲ್ಸೂಮ್(ರ) ಈ ತನಕವೂ ಅವಿವಾಹಿತೆಯಾಗಿದ್ದರು. ಮದೀನ ಮುನವ್ವರಕ್ಕೆ ಹಿಜ್ರಾ ಮಾಡಿ ಬಂದ ನಂತರ ಸಹಾಬಿಗಳಲ್ಲಿ ಪ್ರಗಲ್ಭರಾದ ಝೈದ್ ಬಿನ್ ಹಾರಿಸ(ರ) ರೊಂದಿಗೆ ಇವರ ವಿವಾಹ ನೆರವೇರಿಸಲಾಯಿತು. ಝೈದ್(ರ) ಮೂತ ಯುದ್ಧದಲ್ಲಿ ಹುತಾತ್ಮರಾದರು. ಬಳಿಕ ಇನ್ನೋರ್ವ ಸ್ವರ್ಗದ ಸುವಾರ್ತೆ ಪಡೆದ ಖ್ಯಾತ ಸಹಾಬಿ ಝುಬೈರ್ ಬಿನ್ ಅವ್ವಾಮ್(ರ) ರೊಂದಿಗೆ ಇವರ ವಿವಾಹ ನೆರವೇರಿತು.

ಝೈದ್(ರ) ರೊಂದಿಗೆ ಹೋಲಿಸಿದರೆ ಝುಬೈರ್(ರ) ತುಸು ಕಠಿಣ ಪ್ರಕೃತಿಯ ಮನುಷ್ಯರಾಗಿದ್ದರು. ಅವರ ನಡುವೆ ದಾಂಪತ್ಯದಲ್ಲಿ ಹೊಂದಾಣಿಕೆ ಕಂಡುಬರಲಿಲ್ಲ. ಆದ್ದರಿಂದ ಅನಿವಾರ್ಯವಾಗಿ ಅವರಿಂದ ತ್ವಲಾಕ್ ಪಡೆದು ಇನ್ನೋರ್ವ ಖ್ಯಾತ ಸಹಾಬಿ ಅಬ್ದುರ್ರಹ್ಮಾನ್ ಬಿನ್ ಔಫ್(ರ) ರೊಂದಿಗೆ ವಿವಾಹ ಬಂಧನದಲ್ಲಿ ಏರ್ಪಟ್ಟರು.

ಅಬ್ದುರ್ರಹ್ಮಾನ್ ಬಿನ್ ಔಫ್(ರ) ನಿಧನರಾದ ನಂತರ ಹಝ್ರತ್ ಅಮ್ರು ಬಿನ್ ಆಸ್(ರ) ರನ್ನು ವರಿಸಿದರು. ಅಮ್ರು ಬಿನ್ ಆಸ್(ರ) ಆ ಕಾಲಘಟ್ಟದಲ್ಲಿ ಗವರ್ನರ್ ಆಗಿ ಈಜಿಪ್ಟಿನಲ್ಲಿ ಸೇವೆ ಸಲ್ಲಿಸುತ್ತಿದ್ದರು. ಈ ವಿವಾಹ ನಡೆದು ಕೇವಲ ಒಂದು ತಿಂಗಳಲ್ಲೇ ಉಮ್ಮು ಕುಲ್ಸೂಮ್ (ರ) ನಿಧನರಾದರು. ಇನ್ನಾ ಲಿಲ್ಲಾಹಿ ವಇಲ್ಲಾ ಇಲೈಹಿ ರಾಜಿಊನ್.

ಝುಬೈರ್ ಬಿನ್ ಅವ್ವಾಮ್(ರ) ರಿಂದ ಇವರಿಗೆ ಝೈನಬ್ ಎಂಬ ಹೆಣ್ಣು ಮಗು ಒಂದು ಜನಿಸಿತ್ತು. ಅಬ್ದುರ್ರಹ್ಮಾನ್ ಬಿನ್ ಔಫ್(ರ) ರಿಂದ ಇಬ್ರಾಹೀಮ್, ಹಮೀದ್, ಮುಹಮ್ಮದ್ ಮತ್ತು ಇಸ್ಮಾಈಲ್ ಜನಿಸಿದರು. ಝೈದ್ ಬಿನ್ ಹಾರಿಸ್(ರ) ಮತ್ತು ಅಮ್ರು ಬಿನ್ ಆಸ್ (ರ) ರಿಂದ ಇವರಿಗೆ ಮಕ್ಕಳಿಲ್ಲ.

ಉಮ್ಮು ಕುಲ್ಸೂಮ್(ರ) ಬಹಳ ಘನತೆ ಮತ್ತು ಗಂಭೀರ ಸ್ವಭಾವದ ವನಿತೆಯಾಗಿದ್ದರು. ಇವರಿಂದ ಹಲವಾರು ಪ್ರತಿಷ್ಠಿತರು ಹದೀಸ್‌ಗಳನ್ನು ಉಲ್ಲೇಖಿಸಿರುತ್ತಾರೆ. ಅವರ ಪೈಕಿ ಹುಮೈದ್ ಬಿನ್ ಅಬ್ದುರ್ರಹ್ಮಾನ್, ಹುಮೈದ್ ಬಿನ್ ನಾಫಿಅ್ ಮತ್ತು ಇಬ್ರಾಹೀಮ್ ಬಿನ್ ಅಬ್ದುರ್ರಹ್ಮಾನ್ ಪ್ರಮುಖರು. ಸಹೀಹ್ ಬುಖಾರಿ, ಸಹೀಹ್ ಮುಸ್ಲಿಂ, ಅಬೂದಾವೂದ್, ನಸಾಈ ಮತ್ತು ಇಬ್ನ್ ಮಾಜ ಮುಂತಾದ ಹದೀಸ್ ಗ್ರಂಥಗಳಲ್ಲಿ ಇವರ ವರದಿಗಳು ಉಲ್ಲೇಖಗೊಂಡಿದೆ. ■

# ಉಮರ್(ؓ) ರವರ ನಿಶಾ ಪ್ರಯಾಣ

ಒಮ್ಮೆ ಹೊರಗಿನಿಂದ ಆಗಮಿಸಿದ ವರ್ತಕ ತಂಡವೊಂದು ಮದೀನಾದಲ್ಲಿ ಠಿಕಾಣಿ ಹೂಡಿತು. ಖಲೀಫ ಉಮರ್ (ؓ) ರವರು ಅವರ ಸ್ಥಿತಿಗತಿಗಳನ್ನು ರಹಸ್ಯವಾಗಿ ತಿಳಿಯಲು ರಾತ್ರಿ ಹೊರಟರು. ಜೊತೆಯಲ್ಲಿ ಅಬ್ದುರ್ರಹ್ಮಾನ್ ಬಿನ್ ಔಫ್(ؓ) ಕೂಡಾ ಇದ್ದರು. ಮಧ್ಯರಾತ್ರಿ ಸಮಯ. ಇಬ್ಬರೂ ಪ್ರಯಾಣಿಕ ತಂಡದ ಸನಿಹ ಅಡಗಿ ಕೂತಿದ್ದರು.

"ಅಬ್ದುರ್ರಹ್ಮಾನ್ ನೀವು ನಿದ್ರಿಸಬಾರದು. ನಾವು ಈ ಅತಿಥಿಗಳ ಕಾವಲುಗಾರರಾಗಿದ್ದೇವೆ." ಖಲೀಫರು ಅಬ್ದುರ್ರಹ್ಮಾನ್(ؓ) ರ ಕಿವಿಯಲ್ಲಿ ಮಂತ್ರಿಸಿದರು. ಆಗ ಒಂದು ಮಗುವಿನ ಅಳು ಕೇಳಿಬರುತ್ತದೆ. ಸ್ವಲ್ಪ ಸಮಯದ ಬಳಿಕ ಮಗು ಅಳು ನಿಲ್ಲಿಸಬಹುದೆಂದು ಅವರು ಭಾವಿಸಿದರು. ಆದರೆ, ನಿಲ್ಲಲಿಲ್ಲ. ತುಂಬಾ ಹೊತ್ತು ಅತ್ತರೂ ಅಳು ನಿಲ್ಲಿಸಲಿಲ್ಲ.

ಉಮರ್(ؓ) ರಿಗೆ ತಡೆಯಲಾಗಲಿಲ್ಲ. ಅವರು ಅಳು ಕೇಳಿ ಬಂದ ದಿಕ್ಕಿನೆಡೆಗೆ ತೆರಳಿ ಮಗು ಮತ್ತು ತಾಯಿಯನ್ನು ಪತ್ತೆ ಹಚ್ಚಿದರು.

"ಸಹೋದರಿ, ಮಗುವನ್ನು ಅಳಲು ಬಿಡಬೇಡ. ಮಲಗಿಸಿ ನಿದ್ರಿಸುವಂತೆ ಮಾಡು". ಇಷ್ಟು ಹೇಳಿ ಅವರು ತಮ್ಮ ಜಾಗಕ್ಕೆ ಮರಳಿದರು. ಆದರೆ ಸ್ವಲ್ಪ ಸಮಯದ ನಂತರ ಮಗು ಪುನಃ ಅಳಲಾರಂಭಿಸಿತು. ಸುದೀರ್ಘ ಅಳು. ಉಮರ್(ؓ) ಎದ್ದು ಹೋಗಿ ಆ ಸ್ತ್ರೀಗೆ ಮತ್ತೆ ಉಪದೇಶಿಸಿದರು. ಮೂರನೇ ಬಾರಿ ಮಗು ಅತ್ತಾಗ ಉಮರ್(ؓ) ರವರ ಸಹನೆಯ ಕಟ್ಟೆಯೊಡೆಯಿತು.

"ಸಹೋದರಿ! ನೀವೆಂಥ ದುಷ್ಟ ಮಾತೆ! ಆ ಮಗುವನ್ನು ನಿದ್ರಿಸುವಂತೆ ಮಾಡುವುದಿಲ್ಲವಲ್ಲ!"

ಆ ಸ್ತ್ರೀ ಹೇಳಿದರು: "ಓ ಮಾನವ! ನೀವು ನನಗೆ ಕಿರುಕುಳ ಕೊಡದಿರಿ. ನಾನು ಮಗುವಿಗೆ ಮೊಲೆಹಾಲುಣಿಸುವುದನ್ನು ನಿಲ್ಲಿಸಲು ಪ್ರಯತ್ನಿಸುತ್ತಿದ್ದೇನೆ. ಅದಕ್ಕಾಗಿ ಮಗು ರಟ್ಟೆ ಹಿಡಿಯುತ್ತಿದೆ."

"ಈ ಪುಟ್ಟ ಮಗುವಿಗೆ ಸ್ತನಪಾನವನ್ನು ನಿಲ್ಲಿಸುವಿರಾ?"

"ಸ್ತನಪಾನ ನಿಲ್ಲಿಸಿದರೆ ಮಾತ್ರ ಪಡಿತರ ಲಭಿಸುತ್ತದೆ. ಇದು ಖಲೀಫ ಉಮರ್(ؓ) ರವರ ಆದೇಶ." ಇದನ್ನು ಕೇಳಿ ಉಮರ್ ತಲ್ಲಣಿಸಿದರು.

"ಮಗುವಿಗೆ ಎಷ್ಟು ಪ್ರಾಯವಾಗಿದೆ?" "ಕೆಲವು ತಿಂಗಳುಗಳಷ್ಟೆ!"

"ಏನಿದ್ದರೂ ಆ ಮಗುವಿಗೆ ಇಷ್ಟು ಬೇಗ ಸ್ತನಪಾನ ನಿಲ್ಲಿಸಬಾರದು."

ಮುಂದಿನ ಸಂಭವವನ್ನು ಅಬ್ದುರ್ರಹ್ಮಾನ್ ಬಿನ್ ಔಫ್ ವಿವರಿಸುತ್ತಾರೆ.

"ಅಂದು ಸುಬಹಿ ನಮಾಝ್ ನಿರ್ವಹಿಸುವಾಗ ಉಮರ್(ؓ) ರವರ ಕುರ್‌ಆನ್ ಪಾರಾಯಣ ಸ್ಪಷ್ಟವಾಗಿರಲಿಲ್ಲ. ಏಕೆಂದರೆ ಅವರು ಅಳುತ್ತಿದ್ದರು. ತಡೆಯಲಾಗದ ಅಳು." ನಮಾಝ್‌ನಿಂದ ವಿರಮಿಸಿದ ತಕ್ಷಣ ಅವರು ಹೇಳಿದರು: "ಉಮರ್‌ನ ದೌರ್ಭಾಗ್ಯ! ನಾನು ಅದೆಷ್ಟು ಪುಟಾಣಿಗಳನ್ನು ಹೀಗೆ ಕೊಂದಿರಬಹುದು!"

ಅಂದೇ ಹೊಸ ಶಾಸನವೊಂದನ್ನು ಜ್ಯಾರಿಗೊಳಿಸಿದರು. "ಮಕ್ಕಳಿಗೆ ಪ್ರಾಯವಾಗುವುದಕ್ಕಿಂತ ಮುಂಚಿತವಾಗಿ ಸ್ತನಪಾನ ನಿಲ್ಲಿಸಲು ಅವುಗಳನ್ನು ನಿರ್ಬಂಧಿಸಬಾರದು. ಎಲ್ಲಾ ಮಕ್ಕಳಿಗೆ ಸಾರ್ವಜನಿಕ ಬೊಕ್ಕಸದಿಂದ ಪಡಿತರ ಲಭಿಸುತ್ತದೆ. ಸ್ತನಪಾನ ನಿಲ್ಲಿಸಿದರೂ, ಇಲ್ಲದಿದ್ದರೂ ಈ ಶಾಸನ ಅನ್ವಯವಾಗುತ್ತದೆ." ■